# ಕಾನೂನು ತರಬೇತಿ ಮಾಹಿತಿ ಕೈಪಿಡಿ

## ಪೂರಕ ಕಾನೂನು ತರಬೇತಿ ಯೋಜನೆ

## 2020-23




ಡೆವಲಪ್‌ಮೆಂಟ್ ಎಜುಕೇಶನ್ ಸರ್ವಿಸ್ (ಡೀಡ್ಸ್), ಮಂಗಳೂರು

ಪೂರಕ ಕಾನೂನು ಸುಗಮಕಾರರ ಜಿಲ್ಲಾ ಮಟ್ಟದ ತರಬೇತಿ

# ಕಾನೂನು ತರಬೇತಿ
# ಮಾಹಿತಿ ಕೈಪಿಡಿ

ಕೈಪಿಡಿ ರಚನೆಯಲ್ಲಿ ಭಾಗವಹಿಸಿದವರು

ಮರ್ಲಿನ್ ಮಾರ್ಟಿಸ್

ತುಕಾರಾಮ ಎಕ್ಕಾರು

ದೀಪಾ ಎಂ

ಜೆಸಿಂತಾ ಪಿರೇರಾ

ಕಾಸಮ್ಮ ದೇಸಾಯಿ



## ಡೆವಲಪ್‌ಮೆಂಟ್ ಎಜುಕೇಶನ್ ಸರ್ವಿಸ್ (ಡೀಡ್ಸ್)
## ಮಂಗಳೂರು
## (ಪೂರಕ ಕಾನೂನು ತರಬೇತಿ ಯೋಜನೆ – 2020–2023)

DEEDS/PLF/LEGALTOT/MANUAL/2021

# ಕಾನೂನು ತರಬೇತಿ ಮಾಹಿತಿ ಕೈಪಿಡಿ

## HANDBOOK ON LEGAL TRAINING


| | | |
|---|---|---|
| ಮಾರ್ಗದರ್ಶನ | : | ಮರ್ಲಿನ್ ಮಾರ್ಟಿಸ್ |
| ಸಹಾಯ | : | ತುಕಾರಾಮ ಎಕ್ಕಾರು ಮತ್ತು ದೀಪಾ ಎಂ |
| ಹಕ್ಕುಗಳು | : | ಡೀಡ್ಸ್ ಸಂಪನ್ಮೂಲ ಕೇಂದ್ರ |
| ಪ್ರಥಮ ಮುದ್ರಣ | : | ಮಾರ್ಚ್ 2021 |
| ವಿನ್ಯಾಸ | : | ಜೆಸಿಂತಾ ಪಿರೇರಾ |
| ಮುಖಪುಟ ಚಿತ್ರ ಕೃಪೆ | : | ಅಂತರ್ಜಾಲ ತಾಣ, ಕೆಎಚ್‌ಪಿಟಿ |
| ಪುಟಗಳು | : | 64 |
| ಪ್ರಕಾಶಕರು | : | ಡೀಡ್ಸ್, ಮಂಗಳೂರು |
| ವಿಳಾಸ | : | ಆನಂದ ಅಪಾರ್ಟ್‌ಮೆಂಟ್ಸ್, ಕದ್ರಿ<br>ಮಂಗಳೂರು, ದ.ಕ. 575002.<br>ದೂರವಾಣಿ: 0824–2217022, 4281037<br>deeds82@rediffmail.com<br>www.deedsmangaluru.in |

ಮುಖಪುಟ ವಿನ್ಯಾಸ ಮತ್ತು ಮುದ್ರಣ : ಪಿಕ್ಸೆಲ್ಸ್ ಡಿಸೈನರ್ಸ್, ಕುದ್ರೋಳಿ ಮಂಗಳೂರು

(ಖಾಸಗಿ ಪ್ರಸಾರಕ್ಕಾಗಿ)









DEEDS/PLF/LEGALTOT/MANUAL/2021

# ಪರಿವಿಡಿ

# ಮೊದಲ ಮಾತು

ಡೀಡ್ಸ್ (ಡೆವಲಪ್‌ಮೆಂಟ್‌ಎಜುಕೇಶನ್ ಸರ್ವಿಸ್) ಸಂಸ್ಥೆಯು 1982ರಲ್ಲಿ 'ಕರ್ನಾಟಕ ಸೊಸೈಟಿ ರಿಜಿಸ್ಟ್ರೇಶನ್‌ಆಕ್ಟ್' ಅಡಿಯಲ್ಲಿ ನೋಂದಣಿಗೊಂಡು ಅಭಿವೃದ್ಧಿಪರ ಕ್ಷೇತ್ರದಲ್ಲಿ ಕಳೆದ ಸುಮಾರು 39 ವರ್ಷಗಳಿಂದ ತೊಡಗಿಸಿಕೊಂಡಿರುವ ಒಂದು ಸ್ವಯಂ ಸೇವಾ ಸಂಸ್ಥೆಯಾಗಿದೆ. ದಿವಂಗತರಾದ ಡೆಸ್ಮಂಡ್ ಡಿ' ಅಬ್ರಿಯೋ ಮತ್ತು ಅವರ ಪತ್ನಿ ಮಾರ್ಗರೆಡ್ ಡಿ' ಅಬ್ರಿಯೋ ಅವರಿಂದ ಮಂಗಳೂರಿನಲ್ಲಿ ತನ್ನ ಕಾರ್ಯ ಚಟುವಟಿಕೆಗಳನ್ನು ಆರಂಭಿಸಿದ ಸದರಿ ಸಂಸ್ಥೆಯು ದಕ್ಷಿಣಕನ್ನಡದಲ್ಲಿ ತನ್ನ ಕಾರ್ಯ ವ್ಯಾಪ್ತಿಯನ್ನು ಹೊಂದಿದ್ದು, ಇತ್ತೀಚಿನ ಕೆಲ ವರ್ಷಗಳಿಂದ ಉತ್ತರ ಕರ್ನಾಟಕದತ್ತ ತನ್ನ ಕಾರ್ಯ ಚಟುವಟಿಕೆಗಳನ್ನು ವಿಸ್ತರಿಸಿದೆ. ಪ್ರಸ್ತುತ ಶ್ರೀಮತಿ ಮರ್ಲಿನ್ ಮಾರ್ಟಿಸ್‌ಅವರು ಸಂಸ್ಥೆಯ ನಿರ್ದೇಶಕರಾಗಿ ಸಂಸ್ಥೆಯನ್ನು ಸಮರ್ಥವಾಗಿ ಮುನ್ನಡೆಸುತ್ತಿದ್ದಾರೆ.

ನ್ಯಾಯಯುತ, ಮಾನವೀಯ, ಸಹಭಾಗಿತ್ವ ಮತ್ತು ಸುಸ್ಥಿರತೆಯಿಂದ ಕೂಡಿದ ಸಮಾಜ ನಿರ್ಮಾಣದ ಮುನ್ನೋಟವನ್ನು ಇರಿಸಿಕೊಂಡು ಶಿಕ್ಷಣ, ಮಹಿಳಾ ಸಬಲೀಕರಣ, ಸಂಘಟನೆ, ಪ್ರತಿಪಾದನಾ ಕಾರ್ಯಗಳ (ಅಡ್ವೋಕಸಿ) ಮೂಲಕ ಲಿಂಗತ್ವ ಸಮಾನತೆ ಹಾಗೂ ಮಾನವ ಹಕ್ಕುಗಳನ್ನು ಆಧರಿಸಿದ ಸುಸ್ಥಿರ ಸಮಾಜ ನಿರ್ಮಾಣದ ಗುರಿಯೊಂದಿಗೆ ಇದು ಕಾರ್ಯನಿರತವಾಗಿದೆ. ಬಹಳ ಮುಖ್ಯವಾಗಿ ಡೀಡ್ಸ್, ಸಬಲೀಕರಣ ಹಾಗೂ ಹಕ್ಕುಗಳನ್ನು ಆಧರಿಸಿದ ದೃಷ್ಟಿಕೋನ ಇರಿಸಿಕೊಂಡು ತರಬೇತಿ, ಕಾನೂನು ಹಾಗೂ ದಾಖಲಾತಿ ಎಂಬ ಮೂರು ಪ್ರಮುಖ ವಿಭಾಗಗಳಲ್ಲಿ ಕೆಲಸ ಮಾಡುತ್ತಿದೆ.

ಮಹಿಳೆಯರ ಮೂಲಭೂತ ಹಕ್ಕುಗಳ ರಕ್ಷಣೆ ಹಾಗೂ ಆಕೆಗೆ ನ್ಯಾಯ ಒದಗಿಸಲು ಅನೇಕ ಮಹಿಳಾಪರ ಕಾನೂನುಗಳು ಇದ್ದರೂ ಕೂಡಾ ಅವರು ತಮ್ಮ ಹಕ್ಕು, ಕರ್ತವ್ಯ, ರಕ್ಷಣೆ, ಪ್ರತಿಭಟನೆ, ದೌರ್ಜನ್ಯಕ್ಕೊಳಗಾದ ಇತರ ಹೆಣ್ಣು ಮಕ್ಕಳಿಗೆ ಸ್ಪಂದನೆ ಇತ್ಯಾದಿಗಳನ್ನು ಗಂಭೀರವಾಗಿ ಪರಿಗಣಿಸದೆ ಇರುವುದು ಅವರು ಕಾನೂನಿನ ಅರಿವಿನ ಕೊರತೆಯಿಂದ ಬಳಲುತ್ತಿದ್ದಾರೆ ಎಂಬುದನ್ನು ಸೂಚಿಸುತ್ತದೆ. ಮಹಿಳೆಯರು ತಮ್ಮ ಸುತ್ತಲಿನ ಶೋಷಣಾತ್ಮಕ ಶಕ್ತಿಗಳ ವಿರುದ್ಧ ಹೋರಾಡಬೇಕಾಗಿದೆ. ತಮ್ಮ ನ್ಯಾಯಬದ್ಧ ಸ್ಥಾನವನ್ನು ಮರಳಿ ಗಳಿಸಬೇಕಿದೆ. ಇದು ಸಾಧ್ಯವಾಗಬೇಕಾದರೆ ಪ್ರಧಾನ ಅಸ್ತ್ರಗಳಾದ ಕಾನೂನು ಮತ್ತು ಕಾನೂನಾತ್ಮಕ ಹಕ್ಕುಗಳು ಅವರಿಗೆ ಸಿಗುವಂತಾಗಬೇಕು. ಆದರೆ ನ್ಯಾಯದಾನ ವ್ಯವಸ್ಥೆಯ ಭಾಗಗಳಾದ ನ್ಯಾಯಾಧೀಶರು, ಪೊಲೀಸರು, ವಕೀಲರು ಮುಂತಾದವರು ಎಲ್ಲಿಯವರೆಗೆ ಮಹಿಳಾಪರ ಕಾಳಜಿ ಹೊಂದುವುದಿಲ್ಲವೋ, ಲಿಂಗತ್ವ ಸಂವೇದನಾಶೀಲರಾಗಿರುವುದಿಲ್ಲವೋ ಅಲ್ಲಿಯವರೆಗೆ ಅನ್ಯಾಯಕ್ಕೆ ಒಳಗಾದ ಮಹಿಳೆಯರಿಗೆ ನ್ಯಾಯ ಸಿಗುವುದೆಂಬ ಭರವಸೆ ಇಡುವುದು ಕಷ್ಟ. ಜತೆಗೆ ಹಿಂಸೆಯ ಬಲಿಪಶುಗಳು ಮತ್ತು ಪೊಲೀಸು, ನ್ಯಾಯವಾದಿಗಳು, ನ್ಯಾಯಾಲಯಗಳಂತಹ ನ್ಯಾಯ ವ್ಯವಸ್ಥೆಗಳ ನಡುವೆ ಬಲುದೊಡ್ಡ ಕಂದರವೊಂದು ನಿರ್ಮಾಣವಾಗಿದೆ. ಈ ಕಂದರವನ್ನು ಮುಚ್ಚಲು ನ್ಯಾಯ ವ್ಯವಸ್ಥೆಯನ್ನು ಸಂವೇದನಾಶೀಲಗೊಳಿಸಲು ದುಡಿಯುವ ಕೈಗಳ ಆವಶ್ಯಕತೆಯಿದೆ.

ಈ ಹಿನ್ನೆಲೆಯಲ್ಲಿ ಡೀಡ್ಸ್ ಸಂಸ್ಥೆಯು ಪಾರಾಲೀಗಲ್ ಸುಗಮಗಾರರನ್ನು ತರಬೇತುಗೊಳಿಸುತ್ತಿದೆ. 2020-2023ರ ಸಾಲಿನಲ್ಲಿ ಉತ್ತರಕನ್ನಡ, ಧಾರವಾಡ, ಬಾಗಲಕೋಟೆ, ಬಳ್ಳಾರಿ ಜಿಲ್ಲೆಗಳಲ್ಲಿ ಸುಗಮಗಾರರನ್ನು ರೂಪಿಸುವ ಕಾರ್ಯಚಟುವಟಿಕೆಗಳನ್ನು ಹೊಂದಿರುವ ಸಂಸ್ಥೆಯು ಪ್ರಸ್ತುತ ಉತ್ತರಕನ್ನಡ ಮತ್ತು ಧಾರವಾಡ ಜಿಲ್ಲೆಗಳಲ್ಲಿ ಮೂರು ಹಂತದ ತರಬೇತಿಯನ್ನು ಪೂರೈಸಿರುತ್ತದೆ. ಬಳ್ಳಾರಿ ಮತ್ತು ಬಾಗಲಕೋಟೆಯಲ್ಲಿ ಮೊದಲನೇ ಹಂತದ ಲಿಂಗತ್ವ ತರಬೇತಿಯನ್ನು ಪೂರೈಸಿ ಎರಡನೇ ಹಂತದ ಕಾನೂನು ತರಬೇತಿಯನ್ನು ನೀಡಲು ಸಿದ್ಧವಾಗಿದೆ. ಈ ತರಬೇತಿಗಾಗಿ ಪ್ರಸ್ತುತ ಕೈಪಿಡಿಯನ್ನು ಅಗತ್ಯ ಕಾನೂನುಗಳಿಗೆ ಸೀಮಿತಗೊಳಿಸಿ ಸಿದ್ಧಗೊಳಿಸಲಾಗಿದೆ. ಸುಗಮಕಾರರು ಈ ಕೈಪಿಡಿಯನ್ನು ಚೆನ್ನಾಗಿ ಓದಿ ಕಾಯ್ದೆಗಳನ್ನು ಕರಗತ ಮಾಡಿಕೊಳ್ಳುವುದು ಅಗತ್ಯವಾಗಿದೆ. ಇದರಿಂದ ಕಾನೂನಿನ ಮುಖ್ಯ ಮತ್ತು ಅಗತ್ಯ ಅಂಶಗಳನ್ನು ಜನಸಾಮಾನ್ಯರಿಗೆ ತಲುಪಿಸಲು ಸುಲಭವಾಗುತ್ತದೆ. ಈ ಹಿನ್ನೆಲೆಯಲ್ಲೇ ಕಾಯ್ದೆಯ ಅಂಶಗಳನ್ನು ಸುಲಭವಾಗಿ ಅರ್ಥಮಾಡಿಕೊಳ್ಳಲು ಸಾಧ್ಯವಾಗುವಂತೆ ಈ ಕೈಪಿಡಿ ರಚಿಸಲಾಗಿದೆ.

ತರಬೇತಿ ಪಠ್ಯವನ್ನು ಸಿದ್ಧಗೊಳಿಸುವಲ್ಲಿ ಸಹಕರಿಸಿದ ದೀಪಾ ಎಮ್, ತುಕಾರಾಮ ಎಕ್ಕಾರು ಅವರಿಗೆ, ಕೈಪಿಡಿ ರಚನೆಯ ಜವಾಬ್ದಾರಿಯನ್ನು ನಿರ್ವಹಿಸಿದ ಸಂಪನ್ಮೂಲ ಕೇಂದ್ರ ನಿರ್ವಾಹಕರಾದ ಜೆಸಿಂತಾರವರಿಗೆ ಸಂಸ್ಥೆಯು ಕೃತಜ್ಞತೆಗಳನ್ನು ಸಲ್ಲಿಸುತ್ತದೆ.

ಈ ಕೈಪಿಡಿಯು ಹಿಂಸಾರಹಿತ ಮತ್ತು ಸಮ ಸಮಾಜದ ನಿರ್ಮಾಣದಲ್ಲಿ ತೊಡಗಿರುವ ಎಲ್ಲರಿಗೂ ದಾರಿದೀಪವಾಗಲಿ ಎಂದು ಹಾರೈಸುತ್ತೇವೆ.

**ಮರ್ಲಿನ್ ಮಾರ್ಟಿಸ್**

**ನಿರ್ದೇಶಕರು, ಡೀಡ್ಸ್**

# ಭಾರತದ ಸಂವಿಧಾನ

## ಪ್ರಸ್ತಾವನೆ

ಭಾರತದ ಜನಗಳಾದ ನಾವು ಭಾರತವನ್ನು ಒಂದು ಸಾರ್ವಭೌಮ ಸಮಾಜವಾದೀ ಸರ್ವಧರ್ಮ, ಸಮಭಾವದ ಪ್ರಜಾಸತ್ತಾತ್ಮಕ ಗಣರಾಜ್ಯವಾಗಿ ರಚಿಸಲು ಮತ್ತು ಅದರ ಸಮಸ್ತ ನಾಗರಿಕರಿಗೆ :

ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ನ್ಯಾಯ ;

ವಿಚಾರ, ಅಭಿವ್ಯಕ್ತಿ, ವಿಶ್ವಾಸ, ಧರ್ಮಸ್ರದ್ಧೆ ಮತ್ತು ಉಪಾಸನಾ ಸ್ವಾತಂತ್ರ್ಯ ;

ಸಮಾನ ಸ್ಥಾನಮಾನ ಹಾಗೂ ಅವಕಾಶ ದೊರೆಯುವಂತೆ ಮಾಡಲು ;

ಮತ್ತು ವ್ಯಕ್ತಿ ಗೌರವವನ್ನು, ರಾಷ್ಟ್ರದ ಏಕತೆಯನ್ನು ಹಾಗೂ ಅಖಂಡತೆಯನ್ನು ಸುನಿಶ್ಚಿತಗೊಳಿಸಿ ಅವರಲ್ಲಿ ಭ್ರಾತೃ ಭಾವನೆಯನ್ನು ವೃದ್ಧಿಗೊಳಿಸಲು ಶ್ರದ್ಧಾಪೂರ್ವಕ ಸಂಕಲ್ಪ ಮಾಡಿದವರಾಗಿ ;

ನಮ್ಮ ಸಂವಿಧಾನ ಸಭೆಯಲ್ಲಿ 1949ನೆಯ ಇಸವಿ ನವೆಂಬರ್ ತಿಂಗಳ 26ನೆಯ ತಾರೀಕಾದ ಈ ದಿವಸ ಈ ಮೂಲಕ ಈ ಸಂವಿಧಾನವನ್ನು ಅಂಗೀಕರಿಸಿ, ಅಧಿನಿಯಮಿಸಿ ಅರ್ಪಿಸಿಕೊಂಡಿದ್ದೇವೆ.

# ಭಾರತೀಯ ಸಂವಿಧಾನ ಮತ್ತು ಮಹಿಳೆಯರ ಹಕ್ಕುಗಳು

'ಮಹಿಳೆಯರಿಗೂ ಹಕ್ಕುಗಳಿವೆ, ಮಹಿಳೆಯರು ಪುರುಷರಿಗೆ ಸರಿ ಸಮಾನರು' ಎನ್ನುವ ಮಾತುಗಳನ್ನು ನಾವೆಲ್ಲಾ ಕೇಳುತ್ತಿರುತ್ತೇವೆ. ಈ ಮಾತು ನಿಜ. ಆದರೆ ಮಹಿಳೆಯರಿಗೆ ಸಮಾನತೆ ಎಲ್ಲಿದೆ ? ಶಿಕ್ಷಣ, ಉದ್ಯೋಗ, ವೇತನ ಪಡೆಯುವುದು ಮೊದಲಾದ ಎಲ್ಲಾ ಸಂದರ್ಭಗಳಲ್ಲಿಯೂ ಮಹಿಳೆಯರು ತಾರತಮ್ಯವನ್ನು, ಅಸಮಾನತೆಯನ್ನು ಅನುಭವಿಸುತ್ತಿದ್ದಾರೆ. ಹೀಗಿರುವಾಗ ಮಹಿಳೆಯರಿಗೆ ಸಮಾನತೆ ದೊರೆತಿರುವುದಾದರೂ ಎಲ್ಲಿ ಎಂದು ಹುಡುಕಬೇಕಾಗಿದೆ. ಇಂತಹ ಹುಡುಕಾಟದಲ್ಲಿ ನಮಗೆ ಕಂಡುಬರುವುದು ದೇಶದ ಸಂವಿಧಾನ. ಆದ್ದರಿಂದಲೇ ನಮ್ಮ ಸಂವಿಧಾನ ಏನು ಹೇಳಿದೆ ಎನ್ನುವುದನ್ನು ಮಹಿಳೆಯರು ಅರ್ಥಮಾಡಿಕೊಳ್ಳಬೇಕು.

**ಸಮಾನತೆಯ ಹಕ್ಕು:** ಭಾರತೀಯ ಸಂವಿಧಾನ ಹೇಳುವ ಅತ್ಯಂತ ಪ್ರಮುಖವಾದ ಹಕ್ಕು- 'ಸಮಾನತೆಯ ಹಕ್ಕು'. ಇದರ ಪ್ರಕಾರ, 'ಕಾನೂನಿನ ಮುಂದೆ ಎಲ್ಲರೂ ಸಮಾನರು. ಎಲ್ಲರಿಗೂ ಕಾನೂನಿನ ಸಮಾನ ರಕ್ಷಣೆಯಿದೆ'. ಅಂದರೆ ಗಂಡಿರಲಿ, ಹೆಣ್ಣಿರಲಿ; ಶ್ರೀಮಂತರಿರಲಿ, ಬಡವರಿರಲಿ; ಯಾವ ಜಾತಿ, ಧರ್ಮದವರೇ ಆಗಿರಲಿ; ದೇಶದ ಯಾವುದೇ ಭಾಗದಲ್ಲಿ ವಾಸಿಸುತ್ತಿರಲಿ ಎಲ್ಲರೂ ಒಂದೇ. ಎಲ್ಲರಿಗೂ ಕಾನೂನಿನ ಸಮಾನ ರಕ್ಷಣೆಯನ್ನು ಸರ್ಕಾರ ಒದಗಿಸಬೇಕು.

ಆದರೆ ನಮ್ಮ ಪುರುಷ ಪ್ರಧಾನ ಸಮಾಜದಲ್ಲಿ 'ಹೆಣ್ಣು' ಎನ್ನುವ ಕಾರಣಕ್ಕೆ, ಹೆಂಗಸರು ಮನೆಯಲ್ಲಿ ಹಾಗೂ ಸಮಾಜದಲ್ಲಿ ಹಲವು ತಾರತಮ್ಯಗಳನ್ನು ಅನುಭವಿಸುತ್ತಿದ್ದಾರೆ. ಶಿಕ್ಷಣ, ಉದ್ಯೋಗ, ವೇತನ ಮೊದಲಾದ ಕ್ಷೇತ್ರಗಳಲ್ಲಿ ಅಸಮಾನತೆಯನ್ನು ಅನುಭವಿಸುತ್ತಿದ್ದಾರೆ. ಖಾಸಗಿ ಸಂಸ್ಥೆಗಳ ಮಾತು ಬೇರೆ; ಸರ್ಕಾರ ಅಥವಾ ಸರ್ಕಾರದಿಂದ ಅನುದಾನ ಪಡೆಯುವ ಎಲ್ಲಾ ಸಂಸ್ಥೆಗಳಲ್ಲಿ ಪುರುಷರು ಮತ್ತು ಮಹಿಳೆಯರನ್ನು ಸಮಾನವಾಗಿ ಪರಿಗಣಿಸಬೇಕು. ಹಾಗೇನಾದರೂ ತಾರತಮ್ಯ ಮಾಡಿದರೆ ನ್ಯಾಯಾಲಯದಲ್ಲಿ ದೂರು ಸಲ್ಲಿಸಬಹುದು. ಈ ಕಾನೂನನ್ನು ಉಪಯೋಗಿಸಿದ ಒಂದು ಉದಾಹರಣೆಯನ್ನು ನೋಡೋಣ. ಏರ್ ಇಂಡಿಯಾದಲ್ಲಿ ಗಗನಸಖಿಯರಾಗಿ ಕೆಲಸ ನಿರ್ವಹಿಸುತ್ತಿದ್ದವರು 35 ವರ್ಷಗಳ ನಂತರ ನಿವೃತ್ತಿ ಪಡೆಯಬೇಕು ಎಂಬ ನಿಯಮವಿತ್ತು. ಗಗನಸಖಿಯರಾಗಿ ನೇಮಕಗೊಂಡ ನಾಲ್ಕು ವರ್ಷಗಳೊಳಗೆ ಮದುವೆಯಾದರೆ ಅಥವಾ ಮಗುವನ್ನು ಪಡೆದರೆ ಅಂತಹವರನ್ನು ಕೆಲಸದಿಂದ ತೆಗೆಯಬಹುದಾಗಿತ್ತು.

ಇದು ಮಹಿಳೆಯರ ಮೇಲಿನ ತಾರತಮ್ಯವನ್ನು ತೋರಿಸುತ್ತದೆ. ಇದನ್ನು ಸುಪ್ರೀಂ ಕೋರ್ಟ್ ಅನ್ಯಾಯವೆಂದು ಪರಿಗಣಿಸಿ, ಮದುವೆಯಾದವರನ್ನು ಹಾಗೆ ಕೆಲಸದಿಂದ ತೆಗೆಯುವಂತಿಲ್ಲ ಎಂದು ತೀರ್ಪು ನೀಡಿತು.

2018ರ ಸೆಪ್ಟೆಂಬರ್ ತಿಂಗಳಂದು ಭಾರತದ ಸರ್ವೋಚ್ಚ ನ್ಯಾಯಾಲಯವು ಮಹಿಳೆಯರಿಗೆ ಶಬರಿಮಲೆ ದೇವಸ್ಥಾನಕ್ಕೆ ಪ್ರವೇಶಿಸಲು ಅವಕಾಶ ನೀಡಬೇಕಾಗಿ ಸಲ್ಲಿಸಲಾದ ಮೇಲ್ಮನವಿಯ ಕುರಿತು ಆದೇಶ ಹೊರಡಿಸಿದೆ. ಈ ದೇವಾಲಯದ ಆಡಳಿತ ಮಂಡಳಿಯ ನಿಯಮಾವಳಿಯ ಪ್ರಕಾರ 10 ರಿಂದ 50 ವರ್ಷದೊಳಗಿನ ಮಹಿಳೆಯರು ದೇವಸ್ಥಾನದ ಒಳಗೆ ಪ್ರವೇಶಿಸುವ ಅವಕಾಶವನ್ನು ಕಲ್ಪಿಸಿರಲಿಲ್ಲ. ಮುಟ್ಟಾಗುವ ಮಹಿಳೆಯರು ದೇವಸ್ಥಾನದ ಆವರಣ ಪ್ರವೇಶಿಸಿದಲ್ಲಿ ದೇವಸ್ಥಾನದ ಪಾವಿತ್ರ್ಯತೆ ಧಕ್ಕೆಯಾಗುತ್ತದೆ ಎಂಬ ವಾದವಾಗಿತ್ತು. ಆದರೆ ಸೆಪ್ಟೆಂಬರ್ 2018ರಲ್ಲಿ ಪಂಚ ಸದಸ್ಯ ನ್ಯಾಯಪೀಠವು ಈ ನಿಷೇಧವನ್ನು ತೆರವುಗೊಳಿಸಿದೆ. ಈ ನಿಯಮವು ಭಾರತದ ಸಾಂವಿಧಾನಿಕ ಮೂಲಭೂತ ಹಕ್ಕುಗಳಿಗೆ ವಿರುದ್ಧವಾಗಿದೆ, ಅಲ್ಲದೆ ಅನುಚ್ಛೇಧ 25(1) ಅನ್ವಯ ಪ್ರತಿಯೊಬ್ಬರೂ ಪೂಜಿಸುವ ಹಕ್ಕನ್ನು ಸಾಂವಿಧಾನಿಕವಾಗಿ ಪಡೆದಿರುತ್ತಾರೆ ಎಂದು ನುಡಿದಿದೆ. ಈ ತೀರ್ಪು ಮಹಿಳೆಯರ ಹಕ್ಕುಗಳಿಗೆ ಸಂಬಂಧಿತವಾಗಿದ್ದು, ಸಮಾಜದಲ್ಲಿ ಮಹಿಳೆಯರು ಮತ್ತು ಪುರುಷರಿಗೆ ಸಮಾನರು ಎಂದು ಭಾರತದ ಸರ್ವೋಚ್ಚ ನ್ಯಾಯಾಲಯವು ಮಹತ್ವದ ತೀರ್ಪು ಘೋಷಿಸಿದೆ.

ಸಮಾನತೆಯ ಹಕ್ಕನ್ನು ನೀಡುವ ಜೊತೆ ಜೊತೆಗೇ, ಸಂವಿಧಾನವು ಶೋಷಿತರಿಗೆ ವಿಶೇಷ ಸೌಲಭ್ಯಗಳನ್ನು ಒದಗಿಸಿದೆ. ಶತ ಶತಮಾನಗಳಿಂದಲೂ ಮಹಿಳೆಯರನ್ನು ಶೋಷಿಸುತ್ತಿರುವ ನಮ್ಮ ಸಮಾಜವು ಹಲವು ಅವಕಾಶಗಳಿಂದ ಅವರನ್ನು ವಂಚಿತರನ್ನಾಗಿ ಮಾಡಿದೆ. ಆದ್ದರಿಂದ ಪುರುಷರೊಡನೆ ಸ್ಪರ್ಧಿಸಲು, ಅವಕಾಶಗಳನ್ನು

ಪಡೆದುಕೊಳ್ಳಲು ಮಹಿಳೆಯರಿಗೆ ಸಾಧ್ಯವಾಗುವುದಿಲ್ಲ. ಹೀಗಾಗಿ, ಮಹಿಳೆಯರಿಗೆ ಮೀಸಲಾತಿ ನೀಡುವುದರ ಮೂಲಕ ಶಿಕ್ಷಣ, ಉದ್ಯೋಗ, ರಾಜಕೀಯ ಕ್ಷೇತ್ರಗಳಲ್ಲಿ ಅವಕಾಶಗಳನ್ನು ಕಲ್ಪಿಸಿಕೊಟ್ಟು, ಸಾಮಾಜಿಕ ನ್ಯಾಯ ಒದಗಿಸುವ ಪ್ರಯತ್ನವನ್ನು ಮಾಡಿದೆ. ಇದರಿಂದಾಗಿ, ಮಹಿಳೆಯರು ಸಾರ್ವಜನಿಕ ರಂಗದಲ್ಲಿ ಕಾಣಿಸಿಕೊಳ್ಳುತ್ತಿದ್ದಾರೆ. ಉದಾಹರಣೆಗೆ, ಗ್ರಾಮ ಪಂಚಾಯಿತಿ ಚುನಾವಣೆಯಲ್ಲಿ ಮಹಿಳೆಯರಿಗೆ ಮೀಸಲಾತಿ ನೀಡಿದ್ದರಿಂದ, ಗ್ರಾಮೀಣ ಮಹಿಳೆಯರು ರಾಜಕೀಯ ರಂಗದಲ್ಲಿ ಹೆಚ್ಚಾಗಿ ಕಾಣಿಸಿಕೊಳ್ಳುತ್ತಿದ್ದಾರೆ.

**ಸ್ವಾತಂತ್ರ್ಯದ ಹಕ್ಕು** : ಭಾರತೀಯ ಸಂವಿಧಾನವು ನಮಗೆ ಹಲವು ರೀತಿಯ ಸ್ವಾತಂತ್ರ್ಯವನ್ನು ನೀಡಿದೆ.

1. ಅಭಿವ್ಯಕ್ತಿ ಸ್ವಾತಂತ್ರ್ಯದ ಹಕ್ಕು
2. ಚಲನಶೀಲತೆಯ ಹಕ್ಕು
3. ವಾಸಿಸುವ ಹಕ್ಕು
4. ಸಭೆ ಸಮಾರಂಭಗಳಲ್ಲಿ ಭಾಗವಹಿಸುವ/ ನಡೆಸುವ ಹಕ್ಕು ಹಾಗೂ ಸಂಘಸಂಸ್ಥೆಗಳನ್ನು ರಚಿಸುವ ಹಕ್ಕು
5. ಉದ್ಯೋಗದ ಹಕ್ಕು

6 ಜೀವಿಸುವ ಹಕ್ಕು

7 ಶೋಷಣೆಯ ವಿರುದ್ಧದ ಹಕ್ಕು

8 ಧಾರ್ಮಿಕ ಸ್ವಾತಂತ್ರ್ಯದ ಹಕ್ಕು

9 ಸಂವಿಧಾನಾತ್ಮಕ ಪರಿಹಾರದ ಹಕ್ಕು

1 **ಅಭಿವ್ಯಕ್ತಿ ಸ್ವಾತಂತ್ರ್ಯದ ಹಕ್ಕು** : ತಮಗೆ ಅನಿಸಿದ್ದನ್ನು ಹೇಳುವ, ಅಭಿವ್ಯಕ್ತಿಸುವ ಸ್ವಾತಂತ್ರ್ಯವನ್ನು ಸಂವಿಧಾನವು ನಮಗೆ ಕೊಟ್ಟಿದೆ. ಅಂದರೆ ಭಾಷಣ ಮಾಡಬಹುದು, ಚಿತ್ರ ಬರೆಯಬಹುದು, ಟಿ.ವಿ. ಸಿನಿಮಾಗಳಲ್ಲಿ ಅಭಿನಯಿಸಬಹುದು ಇತ್ಯಾದಿ. ಆದರೆ ಹೆಣ್ಣು ಮಕ್ಕಳನ್ನು ಚಿಕ್ಕಂದಿನಿಂದಲೇ, ಹೆಣ್ಣು ಮಕ್ಕಳು ಜೋರಾಗಿ ಮಾತನಾಡಬಾರದು, ನಗಬಾರದು ಎಂಬ ರೀತಿಯಲ್ಲಿ ಬೆಳೆಸುವುದರಿಂದ, ಹೆಣ್ಣು ಮಕ್ಕಳು ತಮಗೆ ಅನಿಸಿದ್ದನ್ನು ಧೈರ್ಯವಾಗಿ ಹೇಳುವುದಿಲ್ಲ. ಎಷ್ಟೋ ಹೆಣ್ಣು ಮಕ್ಕಳು ಮದುವೆಯಾದ ನಂತರ ತಮ್ಮ ಹವ್ಯಾಸಗಳನ್ನೆಲ್ಲ ಮರೆತು ಮನೆಯೊಳಗೇ ಇದ್ದುಬಿಡುತ್ತಾರೆ. ಮದುವೆಯಾದ ನಂತರ ನೃತ್ಯ ಮಾಡಬಾರದು, ಸಿನಿಮಾಗಳಲ್ಲಿ ನಟಿಸಬಾರದು ಇತ್ಯಾದಿ ನಿರ್ಬಂಧಗಳನ್ನು ಮಹಿಳೆಯರ ಮೇಲೆ ಹೇರಲಾಗುತ್ತದೆ. ಇವೆಲ್ಲವೂ ಸಂವಿಧಾನಕ್ಕೆ ವಿರುದ್ಧವಾದುವು.

2 **ಚಲನಶೀಲತೆಯ ಹಕ್ಕು** : ಯಾವುದೇ ಭಾರತೀಯ ಪ್ರಜೆಯು ದೇಶದ ಯಾವುದೇ ಒಂದು ಭಾಗದಿಂದ ಇನ್ನೊಂದು ಭಾಗಕ್ಕೆ ಸಂಚರಿಸಬಹುದು. ಆದರೆ ಮಹಿಳೆಯರು ಹೊಸಿಲು ದಾಟಿ ಬರುವುದನ್ನು ನಮ್ಮ ಸಮಾಜ ಒಪ್ಪುವುದಿಲ್ಲ. ಇತ್ತೀಚೆಗೆ ಮಹಿಳೆಯರು ಹೊರಗೆ ಬಂದರೂ ಅವರು ಸಾಕಷ್ಟು ಅವಹೇಳನಕಾರಿ ಮಾತುಗಳನ್ನು ಕೇಳಬೇಕಾಗಿ ಬರುತ್ತದೆ. ಈ ನಿರ್ಬಂಧ ಹೇರುವುದಕ್ಕೆ ಕಾರಣವೆಂದರೆ ಅತ್ಯಾಚಾರದ ಭಯ. ಹಗಲಿನ ಹೊತ್ತು ಮಾತ್ರವಲ್ಲ, ಮಧ್ಯರಾತ್ರಿಯಲ್ಲಿಯೂ ಕೂಡಾ ಮಹಿಳೆಯರು ನಿರ್ಭಯವಾಗಿ ಸುರಕ್ಷಿತವಾಗಿ ಓಡಾಡುವಂತಹ ವಾತಾವರಣ ನಿರ್ಮಾಣವಾದಾಗ ಮಾತ್ರ ಮಹಿಳೆಯರು ತಮ್ಮ ಹಕ್ಕುಗಳನ್ನು ಅನುಭವಿಸುವಂತಾಗುತ್ತದೆ.

3 **ವಾಸಿಸುವ ಹಕ್ಕು** : ಯಾವುದೇ ಭಾರತೀಯ ಪ್ರಜೆಯು ದೇಶದ ಯಾವುದೇ ಮೂಲೆಯಲ್ಲಿ ಬೇಕಾದರೂ ವಾಸಿಸಬಹುದಾಗಿದೆ. ಮದುವೆಯಾದ ಹೆಣ್ಣು ಮಗಳನ್ನು ಯಾವುದೇ ಕಾರಣಕ್ಕಾಗಿಯೂ ಮನೆಯಿಂದ ಹೊರಗೆ ತಳ್ಳುವಂತಿಲ್ಲ. ಆಕೆ ಬಯಸಿದರೆ ಗಂಡನ ಮನೆಯಲ್ಲಿ ವಾಸಿಸುವ ಹಕ್ಕು ಅವಳಿಗಿರುತ್ತದೆ. ಗಂಡನ ಮನೆಯ ಕಿರುಕುಳ, ದೌರ್ಜನ್ಯಗಳನ್ನು ಸಹಿಸಲಾಗದಿದ್ದರೆ, ಆಕೆ ಅಲ್ಲಿಂದ ಹೊರಬಂದು ತಂದೆಯ ಮನೆಯಲ್ಲಿ ವಾಸಿಸುವ ಹಕ್ಕನ್ನು ಪಡೆದಿರುತ್ತಾಳೆ. ಆದರೆ, ನಮ್ಮ ಸಮಾಜ ಹೀಗೆ ಹೊರಬರುವ ಹೆಣ್ಣು ಮಕ್ಕಳನ್ನು

ಕೀಳಾಗಿ ನೋಡುತ್ತದೆ. ಆದ್ದರಿಂದಲೇ ಎಷ್ಟೋ ಮಂದಿ ಹೆಣ್ಣು ಮಕ್ಕಳು ಗಂಡನ ಮನೆಯಲ್ಲಿ ಬದುಕಲಾಗದೆ, ತವರಿಗೂ ಬರಲಾಗದೆ, ಆತ್ಮಹತ್ಯೆಯ ದಾರಿ ಹಿಡಿಯುತ್ತಾರೆ. ಇಂತಹ ಧೋರಣೆ ಬದಲಾಗಬೇಕು. ಅವಳಿಗೆ ತಂದೆಯ ಮನೆಯಲ್ಲಿ ಬದುಕಲು ಸಾಧ್ಯವಾಗಬೇಕೆಂದೇ ಪಿತ್ರಾರ್ಜಿತ ಆಸ್ತಿಯಲ್ಲಿ ಹೆಣ್ಣು ಮಕ್ಕಳಿಗೂ ಸಮ ಪಾಲು ಕೊಡಬೇಕೆಂಬ ಕಾನೂನು ಇತ್ತೀಚೆಗೆ ಬಂದಿದೆ. ಇದರಿಂದ ಎಷ್ಟೋ ಮಂದಿ ಹೆಣ್ಣು ಮಕ್ಕಳು ಧೈರ್ಯದಿಂದ ಬದುಕಲು ಸಾಧ್ಯವಾಗಿದೆ.

4 **ಸಭೆ ಸಮಾರಂಭಗಳಲ್ಲಿ ಭಾಗವಹಿಸುವ/ ಸಂಘಸಂಸ್ಥೆಗಳನ್ನು ಕಟ್ಟಿಕೊಳ್ಳುವ ಹಕ್ಕು** : ಮಹಿಳೆಯರು ಸಂಘದಲ್ಲಿ ಸಭೆ ಸೇರುತ್ತಾರೆ, ಬೀಡಿಯ ಸಮಸ್ಯೆಗಳನ್ನು, ಮಹಿಳೆಯರ ಹಾಗೂ ಇತರ ಸಮಸ್ಯೆಗಳನ್ನು ಕುರಿತು ಚರ್ಚಿಸುತ್ತಾರೆ. ಹೀಗೆ ಸಭೆ ಸೇರುವ, ಚರ್ಚಿಸುವ ಹಕ್ಕು ಪ್ರತಿಯೊಬ್ಬರಿಗೂ ಇದೆ. ಅದು ದೇಶಕ್ಕೆ, ಊರಿಗೆ, ತೊಂದರೆಯಾಗಬಾರದು ಅಷ್ಟೆ. ಆದ್ದರಿಂದ ಮಹಿಳೆಯರನ್ನು ಸಭೆಗೆ ಹೋಗದಂತೆ ತಡೆಯುವುದು, ಬಿಡದಿರುವುದು ಸಂವಿಧಾನಕ್ಕೆ ವಿರುದ್ಧವಾದುದು.

ಕೇವಲ ಸಭೆ ಸಮಾರಂಭಗಳಲ್ಲಿ ಭಾಗವಹಿಸುವುದಷ್ಟೇ ಅಲ್ಲ, ಸಂಘ ಸಂಸ್ಥೆಗಳನ್ನು ಕಟ್ಟುವ, ನಡೆಸುವ ಹಕ್ಕು ಎಲ್ಲರಿಗಿದೆ. ಮಹಿಳಾ ಸಂಘಟನೆಗಳು, ಯುವಕ ಮಂಡಲ, ಯುವತಿ ಮಂಡಲ, ಕಾರ್ಮಿಕ ಸಂಘಟನೆಗಳು ಮುಂತಾದುವುಗಳನ್ನು ಕಟ್ಟಿಕೊಳ್ಳುವುದು ನಮ್ಮೆಲ್ಲರ ಹಕ್ಕು. ಹೀಗೆ ಸಂಘಗಳನ್ನು ಕಟ್ಟಿಕೊಳ್ಳುವುದರಿಂದ ನಾವು ಒಟ್ಟಾಗಿ ಸಮಸ್ಯೆಯ ವಿರುದ್ಧ ಹೋರಾಡಬಹುದು. ಉದಾಹರಣೆಗೆ, ದೆಹಲಿಯಲ್ಲಿ 'ಸುಧಾ ಗೋಯಲ್' ಎಂಬ ಹೆಣ್ಣು ಮಗಳನ್ನು ವರದಕ್ಷಿಣೆ ತರಲಿಲ್ಲ ಎನ್ನುವ ಕಾರಣಕ್ಕಾಗಿ ಅವಳ ಗಂಡ ಮತ್ತು ಅತ್ತೆ ಕೊಂದುಹಾಕಿದರು. ಈ ಪ್ರಕರಣದಲ್ಲಿ ಮಹಿಳಾ ಸಂಘಟನೆಗಳು ಅಪರಾಧಿಗಳಿಗೆ ಶಿಕ್ಷೆಯಾಗುವಂತೆ ಮಾಡಿದ್ದಷ್ಟೇ ಅಲ್ಲ, ಕಾನೂನಿನಲ್ಲಿ ತಿದ್ದುಪಡಿ ತರಲು ಕೂಡಾ ಅವುಗಳು ಕಾರಣವಾದವು.

ಆದರೆ ಎಷ್ಟೋ ಮನೆಗಳಲ್ಲಿ ಮಹಿಳೆಯರಿಗೆ ಸಂಘವನ್ನು ಸೇರಲು ಬಿಡುವುದಿಲ್ಲ. ಸಂಘ ಸೇರಿ ಏನು ಮಾಡುತ್ತಿ, ಸಭೆ ಸೇರುವುದರಿಂದ ಏನು ಪ್ರಯೋಜನ ಎಂಬೆಲ್ಲಾ ಮಾತುಗಳನ್ನು ಮಹಿಳೆಯರು ಕೇಳಬೇಕಾಗುತ್ತದೆ. ಪ್ರಯೋಜನ ಯಾವ ರೀತಿಯಿಂದಾದರೂ ಆಗಬಹುದು. ಪ್ರಯೋಜನವನ್ನು ಕೇವಲ ಆರ್ಥಿಕ ದೃಷ್ಟಿಯಿಂದ ನೋಡುವುದು ಸರಿಯಲ್ಲ. ಸಂಘದಲ್ಲಿ ಸೇರಿ ಚರ್ಚಿಸುವುದರಿಂದ ನಮ್ಮ ತಿಳುವಳಿಕೆ ಹೆಚ್ಚುತ್ತದೆ. ನನಗೆ ಸಮಸ್ಯೆಯಾದರೆ ನನ್ನೊಡನೆ ಒಂದಷ್ಟು ಜನರಿದ್ದಾರೆ ಎನ್ನುವ ಭಾವನೆ ಬರುತ್ತದೆ.

5 **ಉದ್ಯೋಗದ ಹಕ್ಕು** : ಪುರುಷರು ಮತ್ತು ಮಹಿಳೆಯರಿಗೂ ಉದ್ಯೋಗ ಮಾಡುವ ಆಯ್ಕೆಯಿದ್ದರೂ ನಮ್ಮ ಸಮಾಜ 'ಉದ್ಯೋಗ ಮಾಡುವುದು ಪುರುಷರ ಲಕ್ಷಣ' ಎಂದು ಒಪ್ಪಿಕೊಂಡುಬಿಟ್ಟಿದೆ. ಎಷ್ಟೋ ಮಂದಿ ಮಹಿಳೆಯರು ಮದುವೆಯಾದ ನಂತರ ಕೆಲಸ ಬಿಟ್ಟುಬಿಡುವುದಿದೆ. ಮಹಿಳೆಯರು ಉದ್ಯೋಗ ಮಾಡಿದರೂ ಕೂಡ ಅವಳ ಆದಾಯವನ್ನು ಪೂರಕ ಆದಾಯವೆಂದೇ ಪರಿಗಣಿಸಲಾಗುತ್ತದೆ. ಅಲ್ಲದೆ ಮಹಿಳೆಯರು ಮಾಡುವ ಮನೆಯ ಕೆಲಸವನ್ನು ಉದ್ಯೋಗವೆಂದು ಪರಿಗಣಿಸುವುದೂ ಇಲ್ಲ.

ಉದ್ಯೋಗದಲ್ಲಿ ಹೆಣ್ಣು ಮಕ್ಕಳಿಗೆ ಹೆರಿಗೆ ಸೌಲಭ್ಯಗಳನ್ನು ಸಂವಿಧಾನ ನೀಡಿದೆ. ಹಾಗೆಯೇ ಕಾರ್ಖಾನೆಯಲ್ಲಿ ದುಡಿಯುವ ಹೆಣ್ಣು ಮಕ್ಕಳಿಗೆ ಅಗತ್ಯವಿರುವಂತಹ ಶೌಚಾಲಯ, ಶಿಶು ಪಾಲನಾ ಕೇಂದ್ರಗಳನ್ನು ತೆರೆಯುವುದು, ಸಮಾನ ಕೆಲಸಕ್ಕೆ ಸಮಾನ ವೇತನ ಕಾಯ್ದೆ ಇವೇ ಮುಂತಾದವುಗಳನ್ನು ಜಾರಿಗೆ ತಂದಿದೆ.

6 **ಜೀವಿಸುವ ಹಕ್ಕು** : ಪ್ರತಿಯೋರ್ವ ಪ್ರಜೆಗೂ ಘನತೆ, ಗೌರವದಿಂದ ಜೀವಿಸುವ, ತನ್ನನ್ನು ತಾನು ರಕ್ಷಿಸಿಕೊಳ್ಳುವ ಹಕ್ಕಿದೆ. ಗಂಡು ಮಗುವಿಗಾಗಿ ಹಂಬಲಿಸುವ ನಮ್ಮ ಸಮಾಜದಲ್ಲಿ ಹೆಣ್ಣು ಮಕ್ಕಳನ್ನು ಹುಟ್ಟಲು ಬಿಡದೆ ಭ್ರೂಣದಲ್ಲೇ ಹೊಸಕಿ ಹಾಕಲಾಗುತ್ತಿದೆ ಹಾಗೂ ಹುಟ್ಟಿದ ಹೆಣ್ಣು ಶಿಶುಗಳನ್ನೂ ಕೊಲ್ಲಲಾಗುತ್ತಿದೆ. ವರ್ಷಕ್ಕೆ ಸುಮಾರು 2 ಲಕ್ಷಕ್ಕೂ ಹೆಚ್ಚು ಹೆಣ್ಣು ಭ್ರೂಣಗಳ ಹತ್ಯೆಯಾಗುತ್ತಿದೆ. ಇದರ ಫಲವಾಗಿ, ಹೆಣ್ಣು ಮಕ್ಕಳ ಸಂಖ್ಯೆ ಕಡಿಮೆಯಾಗುತ್ತಿದೆ. ಇದರಿಂದ ಮುಂದಿನ ದಿನಗಳಲ್ಲಿ ಸಮಾಜದಲ್ಲಿ ಏರುಪೇರು ಉಂಟಾಗುತ್ತಲಿದೆ.

ಬದುಕುವುದಕ್ಕೆ ಅವಕಾಶ ಕೊಡದೆ ಹೆಣ್ಣು ಭ್ರೂಣಹತ್ಯೆ ಹಾಗೂ ಹೆಣ್ಣು ಶಿಶುಹತ್ಯೆ ನಡೆಸುವುದು ಮಾತ್ರವಲ್ಲ, ಹೆಣ್ಣನ್ನು ಕೀಳಾಗಿ ಕಾಣುವುದೂ ಸಹ ಸಂವಿಧಾನಕ್ಕೆ ವಿರೋಧವಾಗಿರುತ್ತದೆ.

7 **ಶೋಷಣೆಯ ವಿರುದ್ಧದ ಹಕ್ಕು** : ಕುಟುಂಬದಲ್ಲಿ ಹಾಗೂ ಸಮಾಜದಲ್ಲಿ ಮಹಿಳೆಯರು ಹಲವು ರೀತಿಯ ಶೋಷಣೆಗೆ ಗುರಿಯಾಗುತ್ತಿದ್ದಾರೆ. ಶಾಲೆಗೆ ಹೋಗಬೇಕಾದ ಚಿಕ್ಕ ಚಿಕ್ಕ ಹೆಣ್ಣು ಮಕ್ಕಳು ಮನೆಕೆಲಸದಲ್ಲಿ, ಕಾರ್ಖಾನೆಯ ದುಡಿಮೆಯಲ್ಲಿ ತೊಡಗಿಕೊಂಡಿದ್ದಾರೆ. ಈ ಮಕ್ಕಳಿಗೆ ಸರಿಯಾಗಿ ಕೂಲಿಯೂ ದೊರೆಯುವುದಿಲ್ಲ. ದೇವದಾಸಿಯರನ್ನಾಗಿ ಮಾಡುವುದು, ವೇಶ್ಯಾವೃತ್ತಿಗೆ ತಳ್ಳುವುದು, ಹೆಣ್ಣು ಮಕ್ಕಳನ್ನು ಮಾರಾಟ ಮಾಡುವುದು. ವರದಕ್ಷಿಣೆಗಾಗಿ ಹಿಂಸಿಸುವುದು, ಕೊಲ್ಲುವುದು ಮೊದಲಾದ ಶೋಷಣೆ, ಕಿರುಕುಳಗಳಿಂದ ಮಹಿಳೆಯರು ನರಳುತ್ತಿದ್ದಾರೆ. ಹೀಗೆ ಶೋಷಿಸುವುದು ಸಂವಿಧಾನದ ಆಶಯಗಳಿಗೆ ವಿರುದ್ಧವಾದುದು. ಇದನ್ನು ಪ್ರಶ್ನಿಸುವ ಹಕ್ಕನ್ನು ಮಹಿಳೆಯರಿಗೆ ಸಂವಿಧಾನವೇ ನೀಡಿದೆ. ಮಹಿಳೆಯರು ತಮ್ಮ ಹಕ್ಕುಗಳನ್ನು ಅರಿತುಕೊಂಡು ಜಾಗೃತರಾಗಿ ಶೋಷಣೆಯ ವಿರುದ್ಧ ಹೋರಾಡಬೇಕಾಗಿದೆ.

8 **ಧಾರ್ಮಿಕ ಸ್ವಾತಂತ್ರ್ಯದ ಹಕ್ಕು** : ಪ್ರತಿಯೋರ್ವ ವ್ಯಕ್ತಿ ತನಗೆ ಇಷ್ಟವಾದ ಧರ್ಮವನ್ನು ಅವಲಂಬಿಸಬಹುದು. ಯಾವ ಧರ್ಮವನ್ನೂ ಸೇರದೆ ಬದುಕಬಹುದು. ಆದರೆ ಧರ್ಮದ ಹೆಸರಿನಲ್ಲಿ ಮಹಿಳೆಯರನ್ನು ದೇವದಾಸಿಯರನ್ನಾಗಿ ಮಾಡುವುದು, ಮಹಿಳೆಯರ ಮೇಲೆ ವಸ್ತ್ರಸಂಹಿತೆಯನ್ನು ಹೇರುವುದು ಮೊದಲಾದ ಶೋಷಣೆಗಳನ್ನು ಮಾಡುವುದು ತಪ್ಪು.

9 **ಸಂವಿಧಾನಾತ್ಮಕ ಪರಿಹಾರದ ಹಕ್ಕು** : ಮೇಲೆ ಹೇಳಿದಂತಹ ಯಾವುದೇ ಹಕ್ಕುಗಳಿಗೆ ಚ್ಯುತಿ ಬಂದಲ್ಲಿ ಉಚ್ಚ ನ್ಯಾಯಾಲಯ ಅಥವಾ ಸರ್ವೋಚ್ಚ ನ್ಯಾಯಾಲಯಕ್ಕೆ ದೂರು ಸಲ್ಲಿಸಿ ನಾವು ನಮ್ಮ ಹಕ್ಕುಗಳನ್ನು ಪಡೆಯಬಹುದಾಗಿದೆ. ಮಹಿಳೆಯರು ತಮ್ಮ ಹಕ್ಕುಗಳನ್ನು ಅನುಭೋಗಿಸುವಂತಾಗಬೇಕು ಎನ್ನುವ ಉದ್ದೇಶದಿಂದ ಸರ್ಕಾರ ಹಲವು ಕಾರ್ಯಕ್ರಮಗಳನ್ನು ರೂಪಿಸಿದೆ. ಮಹಿಳಾ ಆಯೋಗವನ್ನು ರಚಿಸಿದೆ. ಸಾಂತ್ವನ ಕೇಂದ್ರಗಳನ್ನು ತೆರೆದಿದೆ. ಆದರೆ ಇಲ್ಲಿ ಸರ್ಕಾರದ ಪ್ರಯತ್ನವೊಂದೇ ಸಾಲುವುದಿಲ್ಲ. ಮಹಿಳೆಯರೂ ಜಾಗೃತರಾಗಬೇಕು. ಮಹಿಳೆಯರು ತಮ್ಮ ಹಕ್ಕುಗಳ ಬಗ್ಗೆ ಅರಿತುಕೊಂಡು, ತಮ್ಮ ಹಕ್ಕುಗಳಿಗೆ ಧಕ್ಕೆ ಬಂದಾಗ, 'ನ್ಯಾಯಾಲಯಕ್ಕೆ ಹೋಗುವುದು ಅವಮಾನ' ಎಂದು ಭಾವಿಸದೆ, ನ್ಯಾಯಯುತವಾಗಿ ಹೋರಾಡಬೇಕು. ಹೋರಾಟ ಮಾಡದೆ ಮಹಿಳೆಯರಿಗೆ ಹಕ್ಕುಗಳು ದಕ್ಕುವುದಿಲ್ಲ. ಇದನ್ನು ಇತಿಹಾಸ ತೋರಿಸಿಕೊಟ್ಟಿದೆ. ಹೋರಾಟ ಮಾಡಬೇಕಾದರೆ ಸಂಘಟನೆ ಬಹಳ ಮುಖ್ಯ. ಈ ನಿಟ್ಟಿನಲ್ಲಿ ಮಹಿಳಾ ಸ್ವಸಹಾಯ ಗುಂಪುಗಳು ಹೆಚ್ಚು ಕ್ರಿಯಾಶೀಲವಾಗಬೇಕು.

# ಭಾರತದ ಸಂವಿಧಾನ

## ಮೂಲಭೂತ ಕರ್ತವ್ಯಗಳು

ಭಾರತಿಯ ಸಂವಿಧಾನದ ಭಾಗ 4ಎಯಲ್ಲಿ ಅನುಚ್ಚೇದ 51 ಎ ಯಲ್ಲಿ ಮೂಲಭೂತ ಕರ್ತವ್ಯಗಳನ್ನು ತಿಳಿಸಲಾಗಿದೆ . ಅವು :

- ಸಂವಿಧಾನಕ್ಕೆ ಬದ್ಧನಾಗಿದ್ದು, ಅದರ ಆದರ್ಶಗಳನ್ನು, ರಾಷ್ಟ್ರಧ್ವಜ ಮತ್ತು ರಾಷ್ಟ್ರಗಿತೆ ಇವುಗಳನ್ನು ಗೌರವಿಸುವುದು.
- ಸ್ವಾತಂತ್ರ್ಯಕ್ಕಾಗಿ ನಡೆದ ರಾಷ್ಟ್ರೀಯ ಹೋರಾಟಕ್ಕೆ ಸ್ಫೂರ್ತಿ ನೀಡಿದ ಉದಾತ್ತ ಆದರ್ಶಗಳನ್ನು ಗೌರವಿಸಿ ಅನುಸರಿಸುವುದು.
- ಭಾರತದ ಸಾರ್ವಭೌಮತ್ವ, ಏಕತೆ ಮತ್ತು ಅಖಂಡತೆ ಇವುಗಳನ್ನು ಎತ್ತಿಹಿಡಿಯುವುದು ಮತ್ತು ಸಂರಕ್ಷಿಸುವುದು.
- ಕರೆ ಬಂದಾಗ ರಾಷ್ಟ್ರ ರಕ್ಷಣೆ ಮಾಡುವುದು ಮತ್ತು ರಾಷ್ಟ್ರಕ್ಕೆ ಸೇವೆ ಸಲ್ಲಿಸುವುದು.
- ಧಾರ್ಮಿಕ, ಭಾಷಿಕ ಮತ್ತು ಪ್ರಾದೇಶಿಕ ಭಿನ್ನತೆಗಳನ್ನು ಮೀರಿ ಭಾರತೀಯರೆಲ್ಲರಲ್ಲಿ ಸಾಮರಸ್ಯ ಮತ್ತು ಭ್ರಾತೃತ್ವ ಭಾವನೆಯನ್ನು ಪ್ರೋತ್ಸಾಹಿಸುವುದು ಮತ್ತು ಮಹಿಳೆಯರ ಘನತೆಗೆ ಕುಂದು ತರುವಂತಹ ಸಂಪ್ರದಾಯಗಳನ್ನು ತ್ಯಜಿಸುವುದು.
- ನಮ್ಮ ಸಂಯುಕ್ತ ಸಂಸ್ಕೃತಿಯ ಶ್ರೀಮಂತ ಪರಂಪರೆಯನ್ನು ಗೌರವಿಸಿ ಸಂರಕ್ಷಿಸುವುದು.
- ಅರಣ್ಯ, ಸರೋವರ, ನದಿ ಮತ್ತು ವನ್ಯಮೃಗ ಇವುಗಳನ್ನೊಳಗೊಂಡಂತೆ ನೈಸರ್ಗಿಕ ಪರಿಸರವನ್ನು ರಕ್ಷಿಸುವುದು, ಅದಕ್ಕೆ ಸುಧಾರಣೆ ತರುವುದು ಮತ್ತು ಜೀವಿಗಳ ಬಗ್ಗೆ ಅನುಕಂಪ ಹೊಂದಿರುವುದು.
- ವೈಚಾರಿಕ ಮನೋಭಾವ, ಮಾನವೀಯತೆ ಮತ್ತು ಸುಧಾರಾಣಾತ್ಮಕ ದೃಷ್ಟಿಯನ್ನು ಬೆಳೆಸುವುದು.
- ಸಾರ್ವಜನಿಕ ಸ್ವತ್ತನ್ನು ಸಂರಕ್ಷಿಸುವುದು ಮತ್ತು ಹಿಂಸೆಯನ್ನು ಖಂಡಿಸುವುದು.
- ಎಲ್ಲಾ ಕ್ಷೇತ್ರಗಳಲ್ಲಿ ವೈಯಕ್ತಿಕ ಮತ್ತು ಸಾಮೂಹಿಕ ಕಾರ್ಯಕಲಾಪಗಳ ಉತ್ಕೃಷ್ಟತೆಗಾಗಿ ವಿಶೇಷ ಪ್ರಯತ್ನ ಮಾಡಿ ಆ ಮೂಲಕ ರಾಷ್ಟ್ರವು ಸಾಧನೆಯ ಮೇಲ್ಮಟ್ಟಕ್ಕೇರುವಂತೆ ಮಾಡುವುದು.
- ತಂದೆ ತಾಯಿ ಅಥವಾ ಪೋಷಕರು, ಸಂದರ್ಭಾನುಸಾರ 6ರಿಂದ 14 ವರುಷ ವಯಸ್ಸಿನ ತಮ್ಮ ಮಗುವಿಗೆ ಅಥವಾ ತಮ್ಮ ಪರಿಪಾಲಿತ ಮಗುವಿಗೆ ಶಿಕ್ಷಣ ಪಡೆಯಲು ಅವಕಾಶಗಳನ್ನು ಒದಗಿಸುವುದು.

# ಕೌಟುಂಬಿಕ ಹಿಂಸೆಯಿಂದ ಮಹಿಳೆಯರ ರಕ್ಷಣಾ ಕಾಯ್ದೆ– 2005

**ಪ್ರಸ್ತಾವನೆ**

ಕುಟುಂಬ ಮಹಿಳೆಯರಿಗೆ ಭದ್ರತೆ, ರಕ್ಷಣೆಯನ್ನು ನೀಡುವ ಸ್ಥಳ ಎನ್ನುವ ನಂಬಿಕೆಯಿದೆ. ಆದರೆ ಮಹಿಳೆಯರು ಹೆಚ್ಚು ಹಿಂಸೆಯನ್ನು ಅನುಭವಿಸುವುದು ಕುಟುಂಬದ ಒಳಗೇ ಎನ್ನುವುದು ವಾಸ್ತವ ಸಂಗತಿ. ಕುಟುಂಬದೊಳಗೆ ಮಹಿಳೆ ಹುಟ್ಟುವ ಮೊದಲೇ ಆರಂಭವಾಗುವ ಹಿಂಸೆಯು, ಆಕೆ ಬೆಳೆದಂತೆ ಬೇರೆ ಬೇರೆ ಸ್ವರೂಪಗಳನ್ನು ತಾಳುತ್ತಾ ಸಾಯುವವರೆಗೂ (ಸತ್ತ ಮೇಲೂ) ಮುಂದುವರಿಯುತ್ತದೆ. ಕುಟುಂಬದ ವಿಷಯವೆಂದರೆ ಖಾಸಗಿ ವಿಷಯವೆಂದೇ ಭಾವಿಸುವುದರಿಂದ ಕೌಟುಂಬಿಕ ಹಿಂಸೆಯು ವರದಿಯಾಗುವುದಿಲ್ಲ. ಕೌಟುಂಬಿಕ ಹಿಂಸೆಯಿಂದ ಮಹಿಳೆಯರಿಗಷ್ಟೇ ಅಲ್ಲ, ಕುಟುಂಬದ ಇತರ ಸದಸ್ಯರಿಗೆ, ಮಕ್ಕಳಿಗೆ, ಒಟ್ಟು ಸಮಾಜಕ್ಕೆ ತೊಂದರೆಯಾಗುತ್ತದೆ. ಆದ್ದರಿಂದಲೇ, ಇದು ಖಾಸಗಿ ವಿಷಯವಲ್ಲ, ಸಾರ್ವಜನಿಕ ವಿಷಯ. ಅದೊಂದು ಸಾಮಾಜಿಕ ಪಿಡುಗು ಎಂದು ಪರಿಗಣಿಸಿ ಕೌಟುಂಬಿಕ ಹಿಂಸೆಯನ್ನು ತಡೆಗಟ್ಟಲು ಪ್ರಯತ್ನಿಸಲಾಗುತ್ತಿದೆ. ಈ ನಿಟ್ಟಿನಲ್ಲಿ ಭಾರತ ಸರ್ಕಾರವು **'ಕೌಟುಂಬಿಕ ಹಿಂಸೆಯಿಂದ ಮಹಿಳೆಯರ ರಕ್ಷಣಾ ಕಾಯ್ದೆ–2005'**ನ್ನು ಜಾರಿಗೆ ತಂದಿದೆ. ಈ ಕಾನೂನು 2006 ಅಕ್ಟೋಬರ್‌ನಿಂದ ಅನುಷ್ಠಾನಕ್ಕೆ ಬಂದಿದೆ.

**ಕುಟುಂಬವೆಂದರೆ:** ಒಂದು ಸೂರಿನಡಿ ಬದುಕುವ ವ್ಯಕ್ತಿಗಳ ನಡುವಿನ ಸಂಬಂಧವನ್ನು ಕೌಟುಂಬಿಕ ಸಂಬಂಧವೆಂದು ಪರಿಗಣಿಸಲಾಗುತ್ತದೆ. ಅದು ಹೀಗಿರಬಹುದು–

**ವಿವಾಹದ ಮೂಲಕ ಸಂಬಂಧ:** ಗಂಡ, ಮಾವ, ಅತ್ತೆ, ಹೆಂಡತಿ, ಸೊಸೆ, ಅತ್ತಿಗೆ, ನಾದಿನಿ, ಭಾವ, ಮೈದುನ....ಹೀಗೆ

**ರಕ್ತ ಸಂಬಂಧ :** ತಾಯಿ, ಮಗ, ಅಣ್ಣ,ತಂಗಿ, ತಂದೆ, ಮಗಳು .... ಹೀಗೆ

**ಇನ್ನಿತರ ಸಂಬಂಧ:** ದತ್ತು ಸಂಬಂಧ, ವಿಧವೆಯರು, ಕಾನೂನಿನ ದೃಷ್ಟಿಯಲ್ಲಿ ಮಾನ್ಯತೆಯಿಲ್ಲದ ಮದುವೆಗಳಿಂದಾದ ಸಂಬಂಧ, ಲಿವ್ ಇನ್ ಸಂಬಂಧ ಹೀಗೆ.

**ಕೌಟುಂಬಿಕ ಹಿಂಸೆ ಎಂದರೆ:** ಕುಟುಂಬದೊಳಗೆ ಇರುವ ಗಂಡಸರು ಆ ಕುಟುಂಬದಲ್ಲಿ ವಾಸ ಮಾಡುವ ಯಾವುದೇ ಮಹಿಳೆಯ ಮೇಲೆ ಮಾಡುವ ದೈಹಿಕ, ಮಾನಸಿಕ, ಲೈಂಗಿಕ, ಆರ್ಥಿಕ ಹಿಂಸೆ.

**ದೈಹಿಕ ಹಿಂಸೆ:** ಹೊಡೆಯುವುದು, ಬಡಿಯುವುದು, ಕೈಕಾಲುಗಳಿಗೆ ಊನ ಮಾಡುವುದು, ಊಟ ಕೊಡದಿರುವುದು, ಕೊಲೆ ಮಾಡುವುದು, ಆತ್ಮಹತ್ಯೆಗೆ ಪ್ರಚೋದನೆ ಮಾಡುವುದು ಇತ್ಯಾದಿ.

**ಮಾನಸಿಕ ಹಿಂಸೆ:** ನಿಂದಿಸುವುದು, ಎಲ್ಲಿಗೂ ಹೋಗದಂತೆ, ಯಾರೊಡನೆಯೂ ಮಾತನಾಡದಂತೆ ನಿಯಂತ್ರಿಸುವುದು, ಹೆದರಿಸುವುದು, ತಾತ್ಸಾರ ಮಾಡುವುದು, ಆಕೆಯನ್ನು ಅಥವಾ ತವರಿನವರನ್ನು ಹಂಗಿಸುವುದು, ಸಂಶಯ ಪಡುವುದು, ಬೇರೆ ಹೆಂಗಸಿನೊಂದಿಗೆ ಸಂಬಂಧ ಬೆಳೆಸುವುದು, ವರದಕ್ಷಿಣೆಗಾಗಿ ಅವಮಾನಿಸುವುದು...

**ಆರ್ಥಿಕ ಹಿಂಸೆ:** ಖರ್ಚು ವೆಚ್ಚಗಳಿಗೆ ಹಣ ಕೊಡದಿರುವುದು, ಉದ್ಯೋಗಸ್ಥ ಮಹಿಳೆಯಾಗಿದ್ದಲ್ಲಿ ಆಕೆಯ ಎಲ್ಲ ಹಣವನ್ನು ಕಸಿಯುವುದು, ಉದ್ಯೋಗಕ್ಕೆ ಹೋಗಲು ಬಿಡದಿರುವುದು, ಅವಳ ತವರಿನಿಂದ ಕೊಟ್ಟ ಆಸ್ತಿ, ಒಡವೆಯನ್ನು ಕಿತ್ತುಕೊಳ್ಳುವುದು, ಅವಳ ಆಸ್ತಿಯನ್ನು ಅವಳ ಒಪ್ಪಿಗೆಯಿಲ್ಲದೆ ಮಾರಾಟ ಮಾಡುವುದು, ವರದಕ್ಷಿಣೆ ಕೇಳುವುದು ಇತ್ಯಾದಿ.

**ಲೈಂಗಿಕ ಹಿಂಸೆ:** ಹೆಂಡತಿಯ ಲೈಂಗಿಕ ಬಯಕೆಗಳನ್ನು ಪೂರೈಸದಿರುವುದು, ಲೈಂಗಿಕ ಸಂಬಂಧವನ್ನು ಹೊಂದದಿರುವುದು, ಒತ್ತಾಯಪೂರ್ವಕ, ಅಸಹಜ ಲೈಂಗಿಕ ಕ್ರಿಯೆಗೆ ಒತ್ತಾಯಿಸುವುದು, ಬಲಾತ್ಕಾರದ ಸಂಭೋಗ, ಮಕ್ಕಳ ದುರುಪಯೋಗ ಇತ್ಯಾದಿ.

**ಪ್ರತಿವಾದಿಗಳು ಯಾರು?**

ಕುಟುಂಬದಲ್ಲಿ ವಾಸಿಸುವ ಮಹಿಳೆಯನ್ನು ಯಾವುದೇ ರೀತಿಯಲ್ಲಿ ಹಿಂಸಿಸುವ ಅಪ್ಪ, ಅಣ್ಣ, ತಮ್ಮ, ಗಂಡ, ಚಿಕ್ಕಪ್ಪ, ಮಾವ ಅಥವಾ ಕುಟುಂಬದ ಯಾವುದೇ ಪುರುಷ ಸದಸ್ಯರು ಪ್ರತಿವಾದಿಗಳೆನಿಸಿಕೊಳ್ಳುತ್ತಾರೆ. ಮದುವೆಯಾದ ಮಹಿಳೆಯ ಗಂಡನ ಮನೆಯ ಮಹಿಳಾ ಸದಸ್ಯರು (ಉದಾ : ಅತ್ತೆ, ನಾದಿನಿ) ದೌರ್ಜನ್ಯದಲ್ಲಿ ಭಾಗಿಯಾದಲ್ಲಿ ಅವರನ್ನು ಪ್ರತಿವಾದಿಯಾಗಿ ಸೇರಿಸಬಹುದು.

**ಯಾರು ದೂರು ಕೊಡಬಹುದು?**

ದೌರ್ಜನ್ಯಕ್ಕೆ ಒಳಗಾದ ಮಹಿಳೆ, ಆಕೆಯ ತವರು ಮನೆಯವರು, ಅಕ್ಕ ಪಕ್ಕದ ಮನೆಯವರು, ಗೆಳತಿಯರು, ಸ್ವಸಹಾಯ ಸಂಘದ ಸದಸ್ಯರು, ಸ್ವಯಂ ಸೇವಾ ಸಂಸ್ಥೆಗಳು/ ಕಾರ್ಯಕರ್ತರು ಅಥವಾ ಮಹಿಳೆಗಾಗುವ ದೌರ್ಜನ್ಯದ ಮಾಹಿತಿಯಿರುವ ಯಾರು ಬೇಕಾದರೂ ದೂರು ಕೊಡಬಹುದು.

**ಯಾರಿಗೆ ದೂರು ಕೊಡಬೇಕು? ಹೇಗೆ, ಎಲ್ಲಿ ಕೊಡಬೇಕು?**

- ದೌರ್ಜನ್ಯಕ್ಕೆ ಒಳಗಾದ ಮಹಿಳೆ ಅಥವಾ ಮಾಹಿತಿ ಇರುವ ಯಾವುದೇ ವ್ಯಕ್ತಿ ನೇರವಾಗಿ ನ್ಯಾಯಾಲಯಕ್ಕೆ ದೂರು ನೀಡಬಹುದು. ಇಲ್ಲವೇ ಈ ಮಾಹಿತಿಯನ್ನು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯಲ್ಲಿರುವ ರಕ್ಷಣಾ ಅಧಿಕಾರಿಗೆ, ಸಖಿ ಕೇಂದ್ರಕ್ಕೆ, ಸಾಂತ್ವನ ಕೇಂದ್ರ, ಮಹಿಳಾ ಸಹಾಯವಾಣಿ ಅಥವಾ ಪೊಲೀಸರಿಗೆ ಕೊಡಬಹುದು. ವಕೀಲರ ಮೂಲಕ ಸಹ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಬಹುದು.
- ದೌರ್ಜನ್ಯಕ್ಕೆ ಒಳಗಾದ ಮಹಿಳೆಯು ಅರ್ಜಿ ನಮೂನೆಯ ಪ್ರಕಾರ ದೂರಿನಲ್ಲಿ ದೌರ್ಜನ್ಯದ ಬಗ್ಗೆ ಸಂಪೂರ್ಣ ವಿವರವನ್ನು ಕೊಡಬೇಕು ಮತ್ತು ತನಗೆ ಬೇಕಾದ ಪರಿಹಾರಗಳನ್ನು ಸ್ಪಷ್ಟವಾಗಿ ನಮೂದಿಸಬೇಕು.
  ಉದಾ: ರಕ್ಷಣಾ ಆದೇಶ, ಮಕ್ಕಳ ಅಭಿರಕ್ಷಣೆ (ಕಸ್ಟಡಿ) ಆದೇಶ, ಜೀವನಾಂಶದ ಬಗ್ಗೆ, ಹಿಂಸೆ ನಿಲ್ಲಿಸಲು ಆದೇಶ, ಮನೆಯಿಂದ ಹೊರಗೆ ಹಾಕದಂತೆ ಆದೇಶ, ಹಿಂಸೆ ನೀಡುವ ವ್ಯಕ್ತಿಯನ್ನು ಮನೆಯಿಂದ ಹೊರಗೆ ಕಳುಹಿಸುವ ಆದೇಶ, ಕೆಲಸದ ಸ್ಥಳ ಅಥವಾ ಮಕ್ಕಳ ಶಾಲೆಗೆ ಬಂದು ತೊಂದರೆ ಕೊಡದಂತೆ ಆದೇಶ ನೀಡಲು ಮನವಿ ಮಾಡಬಹುದು.
- ತೊಂದರೆಗೊಳಗಾದ ಮಹಿಳೆ ಖಾಯಂ/ ತಾತ್ಕಾಲಿಕವಾಗಿ ವಾಸಿಸುವ ಸ್ಥಳ, ತೊಂದರೆ ಕೊಡುವ ವ್ಯಕ್ತಿ ನೆಲೆಸುವ ಸ್ಥಳ, ಘಟನೆ ನಡೆದ ಸ್ಥಳ ಇದರಲ್ಲಿ ಯಾವುದಾದರೂ ಒಂದು ಜಾಗದ ಪ್ರಥಮ ದರ್ಜೆ ನ್ಯಾಯಿಕ ದಂಡಾಧಿಕಾರಿಗಳ ನ್ಯಾಯಾಲಯ ಅಥವಾ ಮೆಟ್ರೋಪಾಲಿಟನ್ ನ್ಯಾಯಾಲಯದಲ್ಲಿ ದಾವೆಯನ್ನು ದಾಖಲಿಸಬೇಕು.

**ಕಾಯ್ದೆ ಮಹಿಳೆಯರಿಗೆ ಹೇಗೆ ನೆರವಾಗುತ್ತದೆ?**

ಪೊಲೀಸ್ ಅಧಿಕಾರಿ, ಸರಕಾರ ನೇಮಿಸಿದ ರಕ್ಷಣಾ ಅಧಿಕಾರಿಗಳು, ಸೇವಾ ಸಂಸ್ಥೆಗಳು ನೊಂದ ಮಹಿಳೆಗೆ ಅಗತ್ಯವಾದ ನೆರವಿನ ಬಗ್ಗೆ ಸಂಪೂರ್ಣ ಮಾಹಿತಿ ನೀಡಬೇಕು ಎಂದು ಈ ಕಾಯ್ದೆಯು ಸ್ಪಷ್ಟವಾಗಿ ಸೂಚಿಸಿದೆ.

ಉದಾ: ಸಮಾಜ ಸೇವಾ ಸಂಸ್ಥೆಗಳಿಂದ ದೊರೆಯುವ ಸೇವೆಯ ಬಗ್ಗೆ, ರಕ್ಷಣಾ ಅಧಿಕಾರಿಗಳ ಬಗ್ಗೆ, ಉಚಿತ ಕಾನೂನು ನೆರವಿನ ಬಗ್ಗೆ, ವೈದ್ಯಕೀಯ ಪರೀಕ್ಷೆಗೆ ಒಳಪಡುವ ಬಗ್ಗೆ, ಯಾರಿಗೆಲ್ಲ ದೂರು ಕೊಡಬೇಕೆನ್ನುವ ಬಗ್ಗೆ, ರಕ್ಷಣಾ ಗೃಹದ ಬಗ್ಗೆ, ಕಾನೂನಿನಡಿಯಲ್ಲಿ ಸಿಗುವ ಪರಿಹಾರದ ಬಗ್ಗೆ ಮಾಹಿತಿಗಳನ್ನು ನೀಡಬೇಕು.

**ಕಾಯ್ದೆಯ ಅನುಷ್ಠಾನ ಪ್ರಕ್ರಿಯೆ ಹೇಗೆ?**

ನ್ಯಾಯಾಧೀಶರು ತನಗೆ ಬಂದ ಅರ್ಜಿಯ ಮೇಲೆ ಮೊದಲ ವಿಚಾರಣೆಯನ್ನು ತನಗೆ ಅರ್ಜಿ ತಲುಪಿದ ಮೂರು ದಿನಗಳೊಳಗೆ ನಿಗದಿಪಡಿಸಬೇಕು. ಮೊದಲ ವಿಚಾರಣೆಯ ದಿನಾಂಕದಿಂದ 60 ದಿವಸದೊಳಗೆ ನ್ಯಾಯಾಲಯವು ಅರ್ಜಿಯ ತನಿಖೆ ಮಾಡಿ ಪೂರ್ಣಗೊಳಿಸಬೇಕು.

**ನೋಟೀಸಿನ ಜಾರಿ :** ವಿಚಾರಣೆಯ ದಿನಾಂಕವನ್ನು ನಿಗದಿಗೊಳಿಸಿ, ದೌರ್ಜನ್ಯ ಮಾಡಿದ ವ್ಯಕ್ತಿಗೆ ನೋಟೀಸು ನೀಡಲು ಮ್ಯಾಜಿಸ್ಟ್ರೇಟರು ರಕ್ಷಣಾ ಅಧಿಕಾರಿಗೆ ನೀಡುತ್ತಾರೆ. ರಕ್ಷಣಾ ಅಧಿಕಾರಿ ಎರಡು ದಿನಗಳಲ್ಲಿ ನೋಟೀಸನ್ನು ಸಂಬಂಧಪಟ್ಟವರಿಗೆ ಜಾರಿ ಮಾಡಬೇಕು. ಸೂಕ್ತ ಕಾರಣವಿದ್ದಲ್ಲಿ ಹೆಚ್ಚಿನ ಸಮಯಾವಕಾಶವನ್ನು ನ್ಯಾಯಾಲಯವು ನೀಡಬಹುದು.

ವಿಚಾರಣೆಯ ಯಾವುದೇ ಹಂತದಲ್ಲಿ ತೊಂದರೆಗೊಳಗಾದ ಮಹಿಳೆ ಹಾಗೂ ತೊಂದರೆ ಕೊಡುವ ವ್ಯಕ್ತಿಗಳನ್ನು ಒಟ್ಟಾಗಿ ಅಥವಾ ಬೇರೆ ಬೇರೆಯಾಗಿ ಆಪ್ತ ಸಮಾಲೋಚಕರ (ಕೌನ್ಸೆಲರ್) ಬಳಿಗೆ ಕಳುಹಿಸುವ ಆದೇಶ ಮಾಡಬಹುದು. ಸಮಾಲೋಚನೆಗೆ ಕಳುಹಿಸಿದ ನಂತರ ಎರಡು ತಿಂಗಳ ಒಳಗೆ ವಿಚಾರಣೆಯ ದಿನಾಂಕವನ್ನು ನಿಗದಿಪಡಿಸಬೇಕು. ಮೊದಲ ವಿಚಾರಣೆಯ ದಿನಾಂಕದಿಂದ 60 ದಿವಸದೊಳಗೆ ನ್ಯಾಯಾಲಯವು ಅರ್ಜಿಯ ತನಿಖೆ ಮಾಡಿ ಪೂರ್ಣಗೊಳಿಸಬೇಕು.

ಇತ್ತಂಡಗಳಲ್ಲಿ ಯಾರಾದರೂ ಬಯಸಿದಲ್ಲಿ ಅಥವಾ ಸನ್ನಿವೇಶಗಳಿಗೆ ಒಳಪಟ್ಟ ನ್ಯಾಯಾಧೀಶರು ತನಿಖೆಯನ್ನು ಗೌಪ್ಯವಾಗಿ ಮಾಡಬಹುದು.

**ನ್ಯಾಯಾಲಯವು ನೀಡಬಹುದಾದ ಆದೇಶಗಳು**

**ರಕ್ಷಣಾ ಆದೇಶ :** ನ್ಯಾಯಾಲಯವು ಈ ಕೆಳಗಿನ ಸನ್ನಿವೇಶಗಳಲ್ಲಿ ರಕ್ಷಣಾ ಆದೇಶವನ್ನು ನೀಡಬಹುದು. ಕೌಟುಂಬಿಕ ದೌರ್ಜನ್ಯವನ್ನು ಮಾಡದಂತೆ ಅಥವಾ ಅಂತಹ ಕೃತ್ಯವನ್ನು ಮಾಡಲು ಸಹಾಯ ಅಥವಾ ಸಂಚು ನಡೆಸದಂತೆ ತೊಂದರೆಗೊಳಗಾದ ಮಹಿಳೆಯ ಉದ್ಯೋಗ ಸ್ಥಳವನ್ನು ಪ್ರವೇಶಿಸದಂತೆ ಮತ್ತು ತೊಂದರೆಗೊಳಗಾದ ವ್ಯಕ್ತಿ ಮಗುವಾಗಿದ್ದಲ್ಲಿ ಮಗುವಿನ ಶಾಲೆಗೆ ಅಥವಾ ತೊಂದರೆಗೊಳಗಾದ ವ್ಯಕ್ತಿ ವಾಸಿಸುವ ಮನೆಗೆ ಪ್ರವೇಶಿಸದಂತೆ, ತೊಂದರೆಗೊಳಗಾದ ಮಹಿಳೆ/ಮಗುವನ್ನು ವೈಯಕ್ತಿಕವಾಗಿ, ಮೌಖಿಕವಾಗಿ, ಲಿಖಿತ, ದೂರವಾಣಿ ಯಾ ವಿದ್ಯುನ್ಮಾನ ಮಾಧ್ಯಮಗಳ ಮೂಲಕ ಸಂಪರ್ಕಿಸದಂತೆ, ಸಂಪತ್ತನ್ನು ಪರಭಾರೆ ಮಾಡದಂತೆ, ಜಂಟಿಯಾಗಿ ಉಪಯೋಗಿಸುವ ಬ್ಯಾಂಕ್ ಲಾಕರ್ ಅಥವಾ ಬ್ಯಾಂಕ್ ಖಾತೆಯನ್ನು ಒಬ್ಬಂಟಿಯಾಗಿ ಅಥವಾ ಜಂಟಿಯಾಗಿ ಚಲಾಯಿಸದಂತೆ, ಸ್ತ್ರೀಧನ ದುರುಪಯೋಗಪಡಿಸದಂತೆ, ಆಕೆಗೆ ಸಹಾಯ ಮಾಡಿದ ವ್ಯಕ್ತಿಗಳು ಯಾ ಸಂಬಂಧಿಕರ ಮೇಲೆ ದೌರ್ಜನ್ಯ ಮಾಡದಂತೆ, ರಕ್ಷಣಾ ಆದೇಶದಲ್ಲಿ ಸೂಚಿಸಿದ ಇನ್ನಿತರ ಯಾವುದೇ ಅಪರಾಧ ಮಾಡದಂತೆ ರಕ್ಷಣಾ ಆದೇಶವನ್ನು ನೀಡಬಹುದು.

**ವಾಸ್ತವ್ಯದ ಆದೇಶ :** ತೊಂದರೆಗೊಳಗಾದ ಮಹಿಳೆಯನ್ನು ವಾಸ್ತವ್ಯದ ಮನೆಯಿಂದ ಬೇರೆ ಮಾಡದಂತೆ, ಮನೆಯನ್ನು ಪರಭಾರೆ ಮಾಡದಂತೆ, ಸಾಲಕ್ಕೆ ಅಡವಿರಿಸದಂತೆ, ಸಂದರ್ಭ ಬಂದಲ್ಲಿ ತೊಂದರೆ ಕೊಡುವ ವ್ಯಕ್ತಿಯನ್ನು ಮನೆಯಿಂದ ಹೊರಗೆ ಹೋಗುವಂತೆ ಆದೇಶಿಸಬಹುದು. ತೊಂದರೆಗೊಳಗಾದ ಮಹಿಳೆ ವಾಸಿಸುವ ಮನೆಯಲ್ಲಿ ತೊಂದರೆ ಕೊಡುವ ವ್ಯಕ್ತಿಯೊಂದಿಗೆ ಒಟ್ಟಾಗಿ ಜೀವನ ನಡೆಸುವುದು ಕಠಿಣವೆಂದು ನ್ಯಾಯಾಲಯದ ಗಮನಕ್ಕೆ ಬಂದಲ್ಲಿ ನ್ಯಾಯಾಲಯವು ತೊಂದರೆಗೊಳಗಾದ ಮಹಿಳೆ ವಾಸಿಸಲು ಬದಲಿ ವ್ಯವಸ್ಥೆಗೆ ಆದೇಶ ಮಾಡಬಹುದು.

ಆದರೆ ಮೇಲಿನ ಆದೇಶವು ಯಾವುದೇ ಮಹಿಳೆಯ ವಿರುದ್ಧ ಮಾಡಲು ಬರುವುದಿಲ್ಲ. ದೌರ್ಜನ್ಯ ಎಸಗುವ ವ್ಯಕ್ತಿಯಿಂದ ನ್ಯಾಯಾಲಯವು ಮುಚ್ಚಳಿಕೆಯನ್ನು ಬರೆಸಿಕೊಳ್ಳಬಹುದು ಮತ್ತು ತೊಂದರೆಗೊಳಗಾದ ಮಹಿಳೆ, ಮಗುವಿಗೆ ಹೆಚ್ಚುವರಿ ರಕ್ಷಣೆ ಕೊಡುವಂತೆ ಹತ್ತಿರದ ಪೋಲೀಸ್ ಠಾಣೆಗೆ ತಿಳಿಸಬಹುದು.

**ಮೇಲ್ಮನವಿ :** ಯಾರ ವಿರುದ್ಧ ಆದೇಶ ಜಾರಿ ಆಗಿದೆಯೋ, ಆ ವ್ಯಕ್ತಿಯು ಆದೇಶ ಜಾರಿ ಆದ 30 ದಿನದೊಳಗೆ ಸತ್ರ ನ್ಯಾಯಾಲಯಕ್ಕೆ ಮೇಲ್ಮನವಿ ಸಲ್ಲಿಸಲು ಅವಕಾಶವಿದೆ.

**ಶಿಕ್ಷೆ**

ರಕ್ಷಣಾ ಆದೇಶ, ಮಧ್ಯಂತರ ರಕ್ಷಣಾ ಆದೇಶದ ಉಲ್ಲಂಘನೆ ಅಪರಾಧವಾಗಿದ್ದು, ಒಂದು ವರ್ಷದ ಜೈಲುವಾಸ ಅಥವಾ ರೂ. 20,000 ದಂಡ ಅಥವಾ ಇವೆರಡನ್ನು ಒಟ್ಟಿಗೆ ನೀಡಬಹುದು. ನ್ಯಾಯಾಲಯದ ರಕ್ಷಣಾ ಆದೇಶವನ್ನು ಪೊಲೀಸ್ ಅಧಿಕಾರಿಗಳು ಪಾಲಿಸದಿದ್ದಲ್ಲಿ ಅವರ ಮೇಲೆ ಕ್ರಮ ಕೈಗೊಳ್ಳಬಹುದು.

**ರಕ್ಷಣಾ ಅಧಿಕಾರಿಯ ಕರ್ತವ್ಯಗಳು**

ರಕ್ಷಣಾಧಿಕಾರಿಗಳು ರಾಜ್ಯ ಸರಕಾರದಿಂದ ನೇಮಕಗೊಂಡಿರುತ್ತಾರೆ. ಕೌಟುಂಬಿಕ ಕಾಯ್ದೆಯಡಿಯಲ್ಲಿ ಇವರು ಪ್ರಮುಖ ಪಾತ್ರ ವಹಿಸುತ್ತಾರೆ. ಯಾವುದೇ ಒಂದು ಪ್ರಕರಣವು ರಕ್ಷಣಾಧಿಕಾರಿಯ ಗಣನೆಗೆ ಬಂದಲ್ಲಿ ಅದಕ್ಕೆ ಬೇಕಾದ ಸೂಕ್ತ ಕಾನೂನು ಕ್ರಮ ಕೈಗೊಳ್ಳುವಂತೆ ನೋಡಿಕೊಳ್ಳುತ್ತಾರೆ.

- ಯಾವುದೇ ಕೌಟುಂಬಿಕ ಹಿಂಸೆಗೊಳಗಾದ ಸಂತ್ರಸ್ತೆಯು ರಕ್ಷಣಾಧಿಕಾರಿಯ ಬಳಿಗೆ ಸಹಾಯ ಕೋರಿ ಬಂದಾಗ ಅಧಿಕಾರಿಯು ಆಕೆಗೆ ಕಾನೂನು ಮತ್ತು ಕೌಟುಂಬಿಕ ಕಾಯ್ದೆಯಡಿಯಲ್ಲಿ ದೊರೆಯುವ ಎಲ್ಲಾ ಹಕ್ಕುಗಳ ಬಗ್ಗೆ ತಿಳಿಸಿಕೊಡಬೇಕು.
- ರಕ್ಷಣಾಧಿಕಾರಿಯು ಡಿ.ಐ.ಆರ್. (ಡಮೆಸ್ಟಿಕ್ ಇನ್ಸಿಡೆಂಟ್ ರಿಪೋರ್ಟ್–ಕೌಟುಂಬಿಕ ಘಟನಾ ವರದಿ) ದಾಖಲಿಸಿ ಬಾಧಿತ ಮಹಿಳೆಗೆ ರಕ್ಷಣೆ, ವಾಸ್ತವ್ಯ ಅಥವಾ ಇನ್ನಿತರ ಪರಿಹಾರದ ಅಗತ್ಯವಿದ್ದಲ್ಲಿ ಆಕೆಯ ಪರ

ನ್ಯಾಯಾಲಯದಿಂದ ಪಡೆಯಬೇಕಾದ ಆದೇಶಕ್ಕಾಗಿ ಮ್ಯಾಜಿಸ್ಟ್ರೇಟರಿಗೆ ಅರ್ಜಿ ಸಲ್ಲಿಸಬೇಕು. ಡಿ.ಐ.ಆರ್. ಪ್ರತಿಯನ್ನು ಪೊಲೀಸರಿಗೆ ಮತ್ತು ಸೇವಾ ಕೇಂದ್ರಗಳಿಗೆ ಕಳುಹಿಸಬೇಕು. ಬಾಧಿತ ಮಹಿಳೆಯು ಅನಕ್ಷರಸ್ಥೆಯಾದ ಪಕ್ಷದಲ್ಲಿ ರಕ್ಷಣಾಧಿಕಾರಿಯು ನ್ಯಾಯಾಲಯಕ್ಕೆ ಸಲ್ಲಿಸಲಾದ ಅರ್ಜಿಯಲ್ಲಿ ನಮೂದಿಸಿರುವ ವಿಷಯಗಳನ್ನು ವಿವರಿಸಬೇಕು ಮತ್ತು ಅರ್ಜಿಯ ಪ್ರತಿಯನ್ನು ಸಂಬಂಧಪಟ್ಟ ಪೊಲೀಸು ಠಾಣೆಗೆ ಕಳುಹಿಸಬೇಕು.

- ಡಿ.ಐ.ಆರ್. ದಾಖಲಿಸಿ ದೂರುದಾರರಿಂದ ಅಥವಾ ಬಾಧಿತ ವ್ಯಕ್ತಿಯಿಂದ ದೂರಿಗೆ ಸಹಿಯನ್ನು ಪಡೆದುಕೊಳ್ಳಬೇಕು ಮತ್ತು ದೂರಿನ ಪ್ರತಿಯನ್ನು ಉಚಿತವಾಗಿ ನೀಡಬೇಕು.
- ಒಂದು ವೇಳೆ ಸಂತ್ರಸ್ತೆಯು ವೈಯಕ್ತಿಕವಾಗಿ ರಕ್ಷಣಾಧಿಕಾರಿಯನ್ನು ಭೇಟಿಯಾಗಲು ಸಾಧ್ಯವಾಗದಿದ್ದಲ್ಲಿ ದೂರವಾಣಿ ಕರೆ ಅಥವಾ ಇ–ಮೇಲ್ ಮುಖಾಂತರ ದೂರು ನೀಡಬಹುದು. ಈ ದೂರಿನ ಅನುಸಾರ ರಕ್ಷಣಾಧಿಕಾರಿಯು ಕೂಡಲೇ ಪೊಲೀಸು ಸಿಬ್ಬಂದಿಯೊಂದಿಗೆ ಸ್ಥಳಕ್ಕೆ ಭೇಟಿ ನೀಡಿ ಡಿ.ಐ.ಆರ್. ದಾಖಲಿಸಿ ಆಕೆಯ ಪರವಾಗಿ ಸೂಕ್ತ ಆದೇಶಕ್ಕಾಗಿ ನ್ಯಾಯಾಲಯದ ಮುಂದೆ ಅರ್ಜಿ ಸಲ್ಲಿಸಬೇಕು.
- ಹಿಂಸೆಗೊಳಗಾದ ಮಹಿಳೆಗೆ ಕಾನೂನು ಸಹಾಯ ಅಗತ್ಯವಿದ್ದಲ್ಲಿ ರಕ್ಷಣಾಧಿಕಾರಿಯು ತನ್ನ ವ್ಯಾಪ್ತಿಯಲ್ಲಿರುವ ಕಾನೂನು ಸಲಹಾ ಕೇಂದ್ರಕ್ಕೆ ಅರ್ಜಿಯನ್ನು ಸಲ್ಲಿಸಬೇಕು.
- ಆಕೆಗೆ ಸುರಕ್ಷಿತ ಆಶ್ರಯದ ಅವಶ್ಯಕತೆ, ಆಪ್ತ ಸಮಾಲೋಚನೆ ಅಥವಾ ವೈದ್ಯಕೀಯ ಸೌಲಭ್ಯದ ಅಗತ್ಯ ಇದ್ದಲ್ಲಿ ಅದನ್ನು ಆಕೆ ಪಡೆದುಕೊಳ್ಳುವಲ್ಲಿ ಸಹಾಯ ಮಾಡಬೇಕು.
- ರಕ್ಷಣಾಧಿಕಾರಿಯು ಸಂತ್ರಸ್ತೆ ಅಥವಾ ಆಕೆಯ ಕುಟುಂಬಸ್ಥರ ರಕ್ಷಣೆಗಾಗಿ ಯಾವುದೇ ಸೂಕ್ತ ಕ್ರಮ ಕೈಗೊಳ್ಳಬಹುದು.
- ರಕ್ಷಣಾಧಿಕಾರಿಯು ಸೇವಾ ಸಂಸ್ಥೆಗಳ, ವೈದ್ಯಕೀಯ ಸೌಲಭ್ಯಗಳ, ಸಮಾಲೋಚನೆ ಕೇಂದ್ರಗಳ ಪಟ್ಟಿಯನ್ನು ಹೊಂದಿರಬೇಕು.
- ಮಹಿಳೆಯರ ಹಿತಾಸಕ್ತಿಗಾಗಿ ಕಾರ್ಯನಿರ್ವಹಿಸುತ್ತಿರುವ ಸೇವಾ ಕೇಂದ್ರಗಳ ಬಗ್ಗೆ ಆಕೆಗೆ ಅರಿವು ನೀಡಬೇಕು.
- ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿದ ನಂತರ ಸಂತ್ರಸ್ತೆಯ ಪರ ಆದೇಶ ಜಾರಿಗೊಳ್ಳುವಂತೆ ಸಹಾಯ ಮಾಡಬೇಕು.
- ನ್ಯಾಯಾಲಯವು ಆದೇಶ ಹೊರಡಿಸಿದ್ದಲ್ಲಿ ಆ ಆದೇಶ ಜಾರಿಗೊಳ್ಳುವಂತೆ ನೋಡಿಕೊಳ್ಳಬೇಕು.
- ಹಣಕಾಸಿನ ಪರಿಹಾರಗಳು ಆದಷ್ಟು ಬೇಗ ಸಿಗುವ ಹಾಗೆ ಮಾಡುವುದು.
- ಏಕ ಪಕ್ಷೀಯ ಆದೇಶ ಹೊರಡಿಸಿದಲ್ಲಿ ನ್ಯಾಯಾಲಯದ ಲಿಖಿತ ಆದೇಶದ ಮೇರೆಗೆ ರಕ್ಷಣಾಧಿಕಾರಿಯು ಸಂತ್ರಸ್ತೆಯ ಮನೆಗೆ ಭೇಟಿ ನೀಡುವುದು.
- ಮಕ್ಕಳ ಸುಪರ್ದಿ ಅಥವಾ ಮಕ್ಕಳನ್ನು ಭೇಟಿ ಮಾಡಲು ಅವಕಾಶ ನೀಡುವಂತೆ ನೋಡಿಕೊಳ್ಳುವುದು.
- ಪೊಲೀಸರ ಸಹಾಯದಿಂದ ಕೌಟುಂಬಿಕ ಹಿಂಸೆಯಲ್ಲಿ ಬಳಸಲಾದ ಶಸ್ತ್ರಗಳನ್ನು ವಶಪಡಿಸಿಕೊಳ್ಳುವುದು ಅಥವಾ ಮುಟ್ಟುಗೋಲು ಹಾಕುವುದು.

ಈ ಎಲ್ಲಾ ಮೇಲಿನವುಗಳು ರಕ್ಷಣಾಧಿಕಾರಿಯ ಕರ್ತವ್ಯವಾಗಿರುತ್ತದೆ. ರಕ್ಷಣಾಧಿಕಾರಿಯು ತನ್ನ ಕರ್ತವ್ಯವನ್ನು ನಿರ್ವಹಿಸಲು ವಿಫಲರಾದಲ್ಲಿ ರಾಜ್ಯ ಸರಕಾರದ ಅನುಮತಿಯಿಂದ ಶಿಕ್ಷೆಗೆ ಒಳಗಾಗುತ್ತಾರೆ.

**ನ್ಯಾಯಾಲಯದ ಪ್ರಕ್ರಿಯೆ:**

- ಬಾಧಿತ ಮಹಿಳೆ ಅಥವಾ ಆಕೆಯ ಪರವಾಗಿ ಯಾವುದೇ ವ್ಯಕ್ತಿ ಅಥವಾ ರಕ್ಷಣಾಧಿಕಾರಿ ಸೂಕ್ತ ಪರಿಹಾರಕ್ಕಾಗಿ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿದ್ದಲ್ಲಿ, ಅರ್ಜಿಯ ವಿಚಾರಣೆಗಾಗಿ ನ್ಯಾಯಾಲಯವು 3 ದಿನಗಳೊಳಗಾಗಿ ದಿನಾಂಕವನ್ನು ನಿಗದಿಪಡಿಸುತ್ತದೆ.
- ಒಂದು ಪಕ್ಷ ಬಾಧಿತ ಮಹಿಳೆಯು ತಕ್ಷಣದ ಪರಿಹಾರ ಬಯಸಿದ್ದಲ್ಲಿ ಆಕೆಯ ಪರವಾಗಿ ನ್ಯಾಯಾಲಯವು ಏಕ ಪಕ್ಷೀಯ ಆದೇಶವನ್ನು ಹೊರಡಿಸಬಹುದು.
- ಅರ್ಜಿಯ ವಿಚಾರಣೆಗಾಗಿ ಆಪಾದಿತನಿಗೆ ನೊಟೀಸು ಜಾರಿಗೊಳಿಸಿ, ನ್ಯಾಯಾಲಯದ ಮುಂದೆ ಹಾಜರಾಗುವಂತೆ ಆದೇಶಿಸುತ್ತದೆ.
- ಆಪಾದಿತನು ನ್ಯಾಯಾಲಯದ ಮುಂದೆ ಹಾಜರಾದ ನಂತರ ಅರ್ಜಿಯ ಕುರಿತು ತನ್ನ ಹೇಳಿಕೆಯನ್ನು ಬರವಣಿಗೆಯ ಮೂಲಕ ನ್ಯಾಯಾಲಯಕ್ಕೆ ಸಲ್ಲಿಸಬೇಕು.

- ಆಪಾದಿತನು ಹಾಜರಾಗದ ಪಕ್ಷದಲ್ಲಿ ನ್ಯಾಯಾಲಯವು ಏಕಪಕ್ಷೀಯ ಆದೇಶವನ್ನು ಬಾಧಿತ ಮಹಿಳೆಯ ಪರ ಹೊರಡಿಸಬಹುದು.
- ಪ್ರಕರಣದ ವಿಚಾರಣೆಯ ಸಂದರ್ಭದಲ್ಲಿ ಯಾವುದೇ ಹಂತದಲ್ಲಿ ಬೇಕಾದರೂ ನ್ಯಾಯಾಲಯವು ಎರಡೂ ಪಕ್ಷಗಳಿಗೆ ಅಥವಾ ಯಾರಾದರೊಬ್ಬರಿಗೆ ಕೌನ್ಸೆಲಿಂಗ್ ಅಥವಾ ಮಧ್ಯಸ್ಥಿಕೆ ಕೇಂದ್ರಕ್ಕೆ ಹೋಗುವಂತೆ ಆದೇಶ ನೀಡಬಹುದು.
- ಬಾಧಿತ ಮಹಿಳೆ ಇಚ್ಛಿಸಿದಲ್ಲಿ ಪ್ರಕರಣವನ್ನು ಕೌನ್ಸೆಲಿಂಗ್‌ನಲ್ಲಿ ಇತ್ಯರ್ಥಗೊಳಿಸಬಹುದು. ಒಪ್ಪಂದದ ಕರಾರನ್ನು ನ್ಯಾಯಾಲಯದ ಮುಂದೆ ಹಾಜರುಪಡಿಸಬೇಕು. ಯಾವುದೇ ಒತ್ತಡದಿಂದ ಬಾಧಿತ ಮಹಿಳೆಯು ಈ ಕರಾರಿಗೆ ಒಪ್ಪಿಲ್ಲವೆಂದು ನ್ಯಾಯಾಲಯವು ಸ್ಪಷ್ಟಪಡಿಸಬೇಕು.
- ಈ ಒಪ್ಪಂದದ ಅನುಸಾರ ನ್ಯಾಯಾಲಯವು ಆದೇಶ ಹೊರಡಿಸಬಹುದು.
- ಒಂದು ಪಕ್ಷ ಬಾಧಿತ ಮಹಿಳೆಯು ರಾಜಿ ಸಂಧಾನಕ್ಕೆ ಒಪ್ಪದಿದ್ದಲ್ಲಿ ನ್ಯಾಯಾಲಯದ ಮುಖಾಂತರ ವಿಚಾರಣೆಯನ್ನು ಮುಂದುವರಿಸಬಹುದು.
- ವಿಚಾರಣೆಯ ಬಳಿಕ ಅಪರಾಧವು ಸಾಬೀತಾದರೆ ಮಹಿಳೆಯ ಕೋರಿಕೆಯಂತೆ ನ್ಯಾಯಾಲಯವು ಆದೇಶವನ್ನು ಹೊರಡಿಸಬಹುದು.
- ನ್ಯಾಯಾಲಯವು ಬಾಧಿತ ಮಹಿಳೆಗೆ ಸಹಕಾರಿಯಾಗುವಂತಹ ಯಾವುದೇ ಆದೇಶವನ್ನು ಹೊರಡಿಸಬಹುದು.
- ವ್ಯಾಜ್ಯವು ನ್ಯಾಯಾಲಯದ ಮುಂದೆ ವಿಚಾರಣೆ ನಡೆಯುತ್ತಿರುವಾಗ ಯಾವುದೇ ಹಂತದಲ್ಲಿ ಬೇಕಾದರೂ ಮಧ್ಯಸ್ಥಿಕೆ ಕೇಂದ್ರಕ್ಕೆ ಕಳುಹಿಸಬಹುದು. ಮಧ್ಯಸ್ಥಿಕಾ ಕೇಂದ್ರವು ನ್ಯಾಯಾಲಯದ ಆವರಣದಲ್ಲಿ ರಚಿಸಲಾಗಿದ್ದು, ಎರಡೂ ಪಕ್ಷಗಳ ನಡುವಿನ ವಿವಾದವನ್ನು ಕೂಲಂಕಷವಾಗಿ ಪರಿಶೀಲಿಸಿ ಇತ್ಯರ್ಥಗೊಳ್ಳುವಂತೆ ಪಾತ್ರ ವಹಿಸುತ್ತದೆ.
- ಮಧ್ಯಸ್ಥಿಕಾ ಕೇಂದ್ರದಲ್ಲಿ ಮಧ್ಯಸ್ಥಗಾರರಿದ್ದು, ಅವರ ಸಮ್ಮುಖದಲ್ಲಿ ಎರಡೂ ಪಕ್ಷಗಳ ನಡುವಿನ ವಿವಾದ ಆಲಿಸಲಾಗುತ್ತದೆ. ಮಧ್ಯಸ್ಥಿಕಾ ಪ್ರಕ್ರಿಯೆಗೆ ಯಾವುದೇ ರೀತಿ ರಿವಾಜುಗಳು ಇಲ್ಲದಿರುವುದರಿಂದ ಎರಡೂ ಪಕ್ಷಗಳ ಹಿತಾಶಕ್ತಿಯನ್ನು ಗಣನೆಯಲ್ಲಿಟ್ಟು ವ್ಯಾಜ್ಯವನ್ನು ಇತ್ಯರ್ಥಗೊಳಿಸಹುದು.
- ಮಧ್ಯಸ್ಥಿಕೆಯಲ್ಲಿ ವಿವಾದವು ಇತ್ಯರ್ಥವಾದಲ್ಲಿ ಅಥವಾ ಆಗದೇ ಇದ್ದಲ್ಲಿ ಮಧ್ಯಸ್ಥಗಾರರ ಅಂತಿಮ ನಿರ್ಣಯದೊಂದಿಗೆ ನ್ಯಾಯಾಲಯಕ್ಕೆ ವರದಿಯನ್ನು ಸಲ್ಲಿಸಬೇಕು.

**ಸೇವಾ ಸಂಸ್ಥೆಗಳ ನೋಂದಣಿ ಹಾಗೂ ಕಾರ್ಯಗಳು**

- ನೋಂದಣಿಯಾದ, ಕನಿಷ್ಠ 3 ವರ್ಷಗಳ ಸೇವೆಯನ್ನು ನೀಡುತ್ತಾ ಬಂದಿರುವ ಯಾವುದೇ ಸ್ವಯಂ ಸೇವಾ ಸಂಸ್ಥೆಯು ರಾಜ್ಯ ಸರಕಾರಕ್ಕೆ ಅರ್ಜಿ ಸಲ್ಲಿಸಿ ಸೇವಾ ಸಂಸ್ಥೆಯಾಗಿ ನೋಂದಾಯಿಸಿಕೊಳ್ಳಬೇಕು.
- ಇವುಗಳು ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆಯ ಅಡಿಯಲ್ಲಿ ನೋಂದಣಿಗೊಂಡಲ್ಲಿ ಆಶ್ರಯ ಒದಗಿಸುವುದು, ಮಾನಸಿಕ ರೋಗ ಆಪ್ತ ಸಲಹಾ ಕೇಂದ್ರ ನಡೆಸುವುದು, ಕುಟುಂಬ ಆಪ್ತ ಸಮಾಲೋಚನೆ ನಡೆಸುವುದು, ವೃತ್ತಿಪರ ತರಬೇತಿ ಕೇಂದ್ರ ನಡೆಸುವುದು, ವೈದ್ಯಕೀಯ ನೆರವು ನೀಡುವುದು. ಗುಂಪು ಆಪ್ತ ಸಮಾಲೋಚನೆ ಮುಂತಾದ ಸೇವೆಗಳನ್ನು ಒದಗಿಸಬೇಕು.

**ಕೌಟುಂಬಿಕ ಕಾಯ್ದೆಯಲ್ಲಿ ನ್ಯಾಯಾಲಯಕ್ಕೆ ಸಲ್ಲಿಸಲಾದ ಅರ್ಜಿಯ ವಿಚಾರಣೆಗೆ ಇರುವ ಕಾಲಮಿತಿ**

| | |
|---|---|
| ನ್ಯಾಯಾಲಯಕ್ಕೆ ಸಲ್ಲಿಸಲಾದ ಅರ್ಜಿಯ ವಿಚಾರಣೆ | ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿದ ಮೂರು ದಿನಗಳೊಳಗಾಗಿ ಅರ್ಜಿಯ ವಿಚಾರಣೆಗೆ ದಿನಾಂಕವನ್ನು ನಿಗದಿಪಡಿಸಬೇಕು. |
| ಅರ್ಜಿಯ ತನಿಖೆ | ನ್ಯಾಯಾಲಯವು ಅರ್ಜಿಯ ಮೊದಲ ವಿಚಾರಣೆಯ ದಿನದಿಂದ 60 ದಿನಗಳ ಒಳಗೆ ಅರ್ಜಿಯನ್ನು ವಿಲೇವಾರಿಗೊಳಿಸಬೇಕು. |

| | |
|---|---|
| ನೋಟೀಸು ಜಾರಿ | ವಿಚಾರಣೆಯ ದಿನಾಂಕವನ್ನು ನಿಗದಿಪಡಿಸಿದ ನಂತರ ಅರ್ಜಿಯ ಎದುರುದಾರಿಗೆ ನೋಟೀಸು ನೀಡುವಂತೆ ನ್ಯಾಯಾಲಯವು ರಕ್ಷಣಾಧಿಕಾರಿಗಳಿಗೆ ಆದೇಶಿಸುತ್ತದೆ. ಈ ಆದೇಶದ ಜಾರಿಗೊಂಡ ಎರಡು ದಿನಗಳೊಳಗಾಗಿ ರಕ್ಷಾಧಿಕಾರಿಯು ಎದುರುದಾರರಿಗೆ ನೋಟೀಸು ತಲುಪಿಸಬೇಕು.<br>ಎದುರುದಾರಿಗೆ ನೋಟೀಸು ನೀಡುವಂತೆ ನ್ಯಾಯಾಲಯವು ರಕ್ಷಣಾಧಿಕಾರಿಗಳಿಗೆ ಆದೇಶಿಸುತ್ತದೆ. ಈ ಆದೇಶದ ಜಾರಿಗೊಂಡ ಎರಡು ದಿನಗಳೊಳಗಾಗಿ ರಕ್ಷಣಾಧಿಕಾರಿಯು ಎದುರುದಾರರಿಗೆ ನೋಟೀಸು ತಲುಪಿಸಬೇಕು. |
| ಮೇಲ್ಮನವಿ | ನ್ಯಾಯಾಲಯವು ಅಂತಿಮ ಆದೇಶ ಹೊರಡಿಸಿದ 30 ದಿನಗಳೊಳಗಾಗಿ ಮೇಲಿನ ನ್ಯಾಯಾಲಯಕ್ಕೆ ಮೇಲ್ಮನವಿಯನ್ನು ಸಲ್ಲಿಸಬೇಕು. |

**ಚರ್ಚೆಗೆ ಪ್ರಕರಣಗಳು**

**ಪ್ರಕರಣ 1**

ವಿನುತ 38 ವರ್ಷದ ಮಹಿಳೆ. 10ನೇ ತರಗತಿಯವರೆಗೆ ಕಲಿತಿದ್ದಳು. ಇನ್ನೂ ಮದುವೆಯಾಗಿರಲಿಲ್ಲ. ಅವಳ ಅಪ್ಪ, ಅಮ್ಮ ಬಡವರು. ಮಗಳ ಮದುವೆ ಮಾಡಲಾಗಲಿಲ್ಲವಲ್ಲ ಎಂದು ಕೊರಗುತ್ತಿದ್ದರು. ಒಂದು ದಿನ ಪಟ್ಟಣದಲ್ಲಿದ್ದ ವಿನುತಳ ಅತ್ತೆ ಮನೆಗೆ ಬಂದಿದ್ದರು. ವಿನುತಳನ್ನು ನೋಡಿ, ವಿನುತಳನ್ನು ನನ್ನ ಜೊತೆ ಕಳುಹಿಸಿ. ಅಲ್ಲಿ ಅವಳಿಗೆ ಹೊಲಿಗೆ ಕಲಿಸುತ್ತೇನೆ. ಅವಳ ಬದುಕಿಗೊಂದು ದಾರಿಯಾದರೂ ಆಗುತ್ತದೆ. ನಮಗೂ ಸಹಾಯ ಆಗುತ್ತದೆ ಎಂದು ಹೇಳಿ ಕರೆದುಕೊಂಡು ಹೋದರು. ಅತ್ತೆಯ ಮನೆಗೆ ಹೋದ ಮೇಲೆ ವಿನುತ ಹೊಲಿಗೆ ತರಬೇತಿಗೆ ಸೇರಿಕೊಂಡಳು. ಅವಳ ಮಾವ ಮುಂಗೋಪಿ. ಏನೋ ಒಂದು ನೆಪ ತೆಗೆದು ಬೈಯ್ಯುತ್ತಿದ್ದ. ಕೈಗೆ ಸಿಕ್ಕಿದ್ದರಲ್ಲಿ ಹೊಡೆಯುತ್ತಿದ್ದ. ಅವನನ್ನು ಕಂಡರೆ ವಿನುತಳಿಗೆ ಭಯ. ದಿನ ಕಳೆದಂತೆ ವಿನುತಳಿಗೆ ಮಾವನ ಹಿಂಸೆ ಹೆಚ್ಚಾಯಿತು. ತರಬೇತಿ ಮುಗಿದ ಮೇಲೆ ವಾಪಸ್ ಹೋಗಬೇಕು ಎಂದುಕೊಳ್ಳುತ್ತಿದ್ದಳು. ಒಂದು ರಾತ್ರಿ ಮಾವ ವಿನುತಳಿಗೆ ಹೊಡೆದು ಮನೆಯಿಂದ ಹೊರಗೆ ತಳ್ಳಿಬಿಟ್ಟ. ತಡೆಯಲು ಬಂದ ಅವಳ ಅತ್ತೆಗೂ ಹೊಡೆದು ನೀನೂ ಅವಳ ಜೊತೆಗೇ ಹೋಗು ಎಂದು ಕೂಗಾಡಿದ. ವಿನುತಳಿಗೆ ಏನು ಮಾಡಬೇಕೆಂದು ತೋಚಲಿಲ್ಲ. ಪಕ್ಕದ ಮನೆಯಲ್ಲಿ ಆಶ್ರಯ ಪಡೆದಳು. ವಿನುತಳಿಗೆ ತರಬೇತಿ ಮುಗಿಯುವವರೆಗೆ ಆ ಮನೆಯಲ್ಲಿಯೇ ಇರಬೇಕಾಗಿತ್ತು. ಆದರೆ ಮಾವನ ಹಿಂಸೆ ತಡೆಯಲಾಗುತ್ತಿಲ್ಲ.

- ವಿನುತ ಈಗ ಏನು ಮಾಡಬಹುದು? ಅವಳಿಗೆ ಆ ಮನೆಯಲ್ಲಿರಲು ಹಕ್ಕಿದೆಯೆ?
- ಕಾನೂನು ಅವಳಿಗೆ ನೆರವಾಗುತ್ತದೆಯೆ?

**ಪ್ರಕರಣ 2**

ಸೀಮಾಳು ಅನಕ್ಷರಸ್ಥೆಯಾಗಿದ್ದು ಕೂಲಿ ಕೆಲಸ ಮಾಡಿ ಜೀವನ ಸಾಗಿಸುತ್ತಿದ್ದಳು. ಆಕೆಯ ತಾಯಿ ವೃದ್ಧೆಯಾಗಿದ್ದು, ಸೀಮಾಳ ವಿವಾಹವನ್ನು ತನ್ನ ಜೀವಿತಾವಧಿಯಲ್ಲೇ ಮಾಡಿ ಮುಗಿಸಬೇಕೆಂಬ ಕಾತುರದಿಂದ ತನ್ನ ಸಂಬಂಧಿಕರು ಸೂಚಿಸಿದ ಹುಡುಗನೊಂದಿಗೆ ವಿವಾಹ ಮಾಡಿ ಕೊಟ್ಟರು. ವಿವಾಹದ ನಂತರ ಆಕೆಯು ಗಂಡ ಮತ್ತು ಅತ್ತೆಯೊಂದಿಗೆ ಬೆಂಗಳೂರಿಲ್ಲಿರುವ ಗಂಡನ ಮನೆಗೆ ಸುಖ ಸಂಸಾರ ನಡೆಸುವ ಕನಸುಗಳನ್ನು ಹೊತ್ತು ಹೊರಟಳು. ಬೆಂಗಳೂರಿಗೆ ಹೋದ ಬಳಿಕ ಆಕೆಯ ಕನಸುಗಳೆಲ್ಲ ನುಚ್ಚುನೂರಾದವು. ಆಕೆಯ ಗಂಡ ಕುಡಿತದ ವ್ಯಸನಿಯಾಗಿದ್ದು ನಿರುದ್ಯೋಗಿಯಾಗಿದ್ದ ಎಂಬ ವಿಚಾರವು ಮದುವೆಯ ನಂತರ ಬೆಳಕಿಗೆ ಬಂತು. ಪ್ರತಿದಿನ ಆಕೆಯ ಗಂಡ ಕುಡಿದು ಬಂದು ಆಕೆಗೆ ಅವಾಚ್ಯ ಶಬ್ದಗಳಿಂದ ಬೈಯುತ್ತಿದ್ದ ಮತ್ತು ಸರಿಯಾಗಿ ಹೊಡೆಯುತ್ತಿದ್ದ. ಆಕೆಯ

ಅತ್ತೆಯು ಮಗನಿಗೆ ಬುದ್ಧಿ ಮಾತು ಹೇಳುವ ಬದಲು ಮಗನೊಂದಿಗೆ ಸೇರಿ ಸೊಸೆಗೆ ಸರಿಯಾಗಿ ಹೊಡೆಯುತ್ತಿದ್ದಳು. ಸೀಮಾಳಿಗೆ ಮುಂದೆ ಏನು ಮಾಡಬೇಕೆಂದೇ ದಾರಿ ತೋಚಲಿಲ್ಲ.

- ಸೀಮಾಳು ಯಾವ ರೀತಿಯ ದೌರ್ಜನ್ಯಕ್ಕೆ ಒಳಗಾಗಿದ್ದಾಳೆ?
- ಸೀಮಾಳು ಮುಂದೆ ಏನು ಮಾಡಬಹುದು?
- ಕಾನೂನಿನಿಂದ ಆಕೆಗೆ ಪರಿಹಾರ ದೊರೆಯಬಹುದೇ ?

## ಸರ್ವೋಚ್ಚ ನ್ಯಾಯಾಲಯದ ಆದೇಶ

**ತೀರ್ಪು 1**

**ಸತೀಶ್‌ಚಂದರ್ ಆಹುಜ ವರ್ಸಸ್ ಸ್ನೇಹ ಆಹುಜ**

ಸತೀಶ್‌ಚಂದರ್ ಆಹುಜರವರ ಮಗ ಮತ್ತು ಸೊಸೆ (ಸ್ನೇಹ ಆಹುಜ) ವಿವಾಹದ ನಂತರ ಸತೀಶ್‌ಚಂದರ್ ಅಹುಜರವರ ಆಸ್ತಿಯ ಮೊದಲನೇ ಮಹಡಿಯಲ್ಲಿ ವಾಸ್ತವ್ಯದಲ್ಲಿರುತ್ತಾರೆ. ವೈವಾಹಿಕ ಸಂಬಂಧದ ಬಿರುಕಿನಿಂದ ಸತೀಶ ಚಂದರ್ ಅಹುಜರವರ ಮಗ ನೆಲ ಮಹಡಿಯಲ್ಲಿರುವ ಅತಿಥಿ ಗೃಹದಲ್ಲಿ ನೆಲೆಸಲು ಪ್ರಾರಂಭಿಸುತ್ತಾನೆ. ಸತೀಶ್ ಆಹುಜರ ಸೊಸೆ ಸ್ನೇಹ ಆಹುಜ ತನ್ನ ಗಂಡ, ಮಾವ ಮತ್ತು ಅತ್ತೆಯ ವಿರುದ್ಧ ಕೌಟುಂಬಿಕ ದೌರ್ಜನ್ಯ ತಡೆ ಕಾಯ್ದೆಯಡಿ ಪ್ರಕರಣ ದಾಖಲಿಸಿ, ಮಾವನ ಆಸ್ತಿಯಲ್ಲಿ ನನಗೆ ವಾಸಿಸುವ ಹಕ್ಕು ಇರುವುದಾಗಿ ವಾದಿಸುತ್ತಾಳೆ. ಮಗನ ಜೀವಿತಾವಧಿಯಲ್ಲಿ ಸೊಸೆಯ ಜವಾಬ್ದಾರಿಯನ್ನು ವಹಿಸಿಕೊಳ್ಳುವ ಕರ್ತವ್ಯ ಮಾವ ಮತ್ತು ಅತ್ತೆಗೆ ಇರುವುದಿಲ್ಲ ಎಂದು ಸತೀಶ್‌ರವರು ತಮ್ಮ ಪರ ವಾದಿಸುತ್ತಾರೆ. ವಾದ ವಿವಾದಗಳ ನಂತರ ಆಸ್ತಿಯನ್ನು ತೆರವುಗೊಳಿಸುವಂತೆ ನ್ಯಾಯಾಲಯವು ಸ್ನೇಹ ಆಹುಜರವರಿಗೆ ಆದೇಶಿಸುತ್ತದೆ. ಈ ಆದೇಶದ ವಿರುದ್ಧ ಸ್ನೇಹ ಆಹುಜ ದಿಲ್ಲಿ ಉಚ್ಚ ನ್ಯಾಯಾಲಯಕ್ಕೆ ಮೇಲ್ಮನವಿ ಸಲ್ಲಿಸುತ್ತಾಳೆ. ದಿಲ್ಲಿ ಉಚ್ಚ ನ್ಯಾಯಾಲಯವು ಕೆಳ ನ್ಯಾಯಾಲಯದ ಆದೇಶವನ್ನು ತಳ್ಳಿಹಾಕಿ ಅರ್ಜಿಯನ್ನು ಮರುಪರಿಶೀಲಿಸುವಂತೆ ಆದೇಶ ಹೊರಡಿಸುತ್ತದೆ. ಈ ಆದೇಶದ ವಿರುದ್ಧ ಸತೀಶ್ ಆಹುಜರವರು **ಎಸ್.ಆರ್ ಭಟ್ರಾಸ್** ಎಂಬ ಪ್ರಕರಣದ ಆದೇಶವನ್ನು ಆಧಾರವಾಗಿಟ್ಟು ಸರ್ವೋಚ್ಚ ನ್ಯಾಯಾಲಯಕ್ಕೆ ಮೇಲ್ಮನವಿ ಸಲ್ಲಿಸುತ್ತಾರೆ. ಎಸ್.ಆರ್ ಭಟ್ರಾಸ್ ಪ್ರಕರಣದ ಆದೇಶದಂತೆ ಈ ಕೇಸಿನಲ್ಲಿರುವ ಆಸ್ತಿಯು ಪಾಲುದಾರಿಕೆಯ ಆಸ್ತಿ ಅಥವಾ ಅವಿಭಜಿತ ಕುಟುಂಬದ ಆಸ್ತಿ ಆಗಿರುವುದಿಲ್ಲ, ಈ ಆಸ್ತಿಯು ವಾದಿಯ ಸ್ವಯಾರ್ಜಿತ ಆಸ್ತಿಯಾಗಿದ್ದು, ಸತೀಶ್ ಆಹುಜರವರ ಮಗ ಯಾವುದೇ ಪಾಲುದಾರಿಕೆಯ ಹಕ್ಕನ್ನು ಹೊಂದಿರುವುದಿಲ್ಲ. ಆದುದರಿಂದ ಸೊಸೆಯು ಆಸ್ತಿಯಲ್ಲಿ ವಾಸಿಸುವ ಹಕ್ಕನ್ನು ಪಡೆದಿಲ್ಲ ಎಂದು ವಾದ ಮಂಡಿಸುತ್ತಾರೆ. ಈ ಪ್ರಕರಣದ ವಿಚಾರಣೆಯ ನಂತರ ಸರ್ವೋಚ್ಚ ನ್ಯಾಯಾಲಯವು ಅಂತಿಮ ತೀರ್ಪು ಹೊರಡಿಸಿರುತ್ತದೆ. ಈ ತೀರ್ಪಿನ ಅನುಸಾರ ಕೌಟುಂಬಿಕ ಕಾಯ್ದೆಯಡಿಯಲ್ಲಿ ಪಾಲುದಾರಿಕೆಯ ಹಕ್ಕು ಎಂಬ ಪದದ ಅರ್ಥವನ್ನು ವಿಸ್ತಾರಗೊಳಿಸಿದೆ. ಈ ತೀರ್ಪಿನ ಅನ್ವಯ ಕೌಟುಂಬಿಕ ಕಾಯ್ದೆಯಡಿ ಪಾಲುದಾರಿಕೆಯ ಹಕ್ಕು ಎಂದರೆ ಸಂತ್ರಸ್ತೆಯು ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸುವ ಸಮಯದಲ್ಲಿ ವಾಸಿಸುತ್ತಿರುವ ಮನೆ ಅಥವಾ ಇತ್ತೀಚೆಗೆ ವಾಸಿಸುತ್ತಿರುವ ಮನೆ ಅಥವಾ ತಾತ್ಕಾಲಿಕವಾಗಿ ಮನೆಯಲ್ಲಿ ವಾಸಿಸುತ್ತಿಲ್ಲವಾದರೆ ಆ ಮನೆಯನ್ನು ಪಾಲುದಾರಿಕೆಯ ಹಕ್ಕು ಎಂದು ಪರಿಗಣಿಸಲಾಗಿದೆ. ಆದುದರಿಂದ ಸಂತ್ರಸ್ತೆಯು ಆ ಮನೆಯಲ್ಲಿ ವಾಸಿಸುವ ಸಂಪೂರ್ಣ ಹಕ್ಕನ್ನು ಪಡೆದಿರುತ್ತಾಳೆ ಎಂದು ನ್ಯಾಯಾಲಯವು ಘೋಷಿಸಿದೆ.

**ತೀರ್ಪು 2**

**ರೇಖಾ ವರ್ಸಸ್ ರಮೇಶ್**

ರಮೇಶ್ ಮತ್ತು ರೇಖಾರವರು ಪ್ರೇಮ ವಿವಾಹವಾಗಿದ್ದು, ವೈವಾಹಿಕ ಸಂಬಂಧದಿಂದ ಹೆಣ್ಣು ಮಗು ಜನಿಸಿರುತ್ತದೆ. ಆದರೆ ದುರದೃಷ್ಟವಶಾತ್ ರೇಖಾರವರ ವೈವಾಹಿಕ ಜೀವನವು ಆಕೆಯ ಗಂಡ, ನಾದಿನಿ ಮತ್ತು ಅತ್ತೆಯ ಕಿರುಕುಳದಿಂದ ಛಿದ್ರವಾಗಿರುತ್ತದೆ. ರಮೇಶನು ರೇಖಾಳನ್ನು ಸಂಶಯಾಸ್ಪದವಾಗಿ ನೋಡುತ್ತಿದ್ದ, ಮಾತ್ರವಲ್ಲದೆ ಆಕೆಗೆ ಮತ್ತು ಮಗಳಿಗೆ ಯಾವುದೇ ರೀತಿಯ ಮೂಲಭೂತ ಸೌಕರ್ಯಗಳನ್ನು ನೀಡುತ್ತಿರಲಿಲ್ಲ. ವಿವಾಹದ ನಂತರ ರೇಖಾಳಿಗೆ ಪಾರ್ಶ್ವವಾಯು ಆಗಿದ್ದು ತನ್ನ ಕೈಕಾಲುಗಳ ಸ್ವಾಧೀನತೆಯನ್ನು ಕಳೆದುಕೊಂಡಿರುತ್ತಾಳೆ.

ದಿನಗಳು ಕಳೆದಂತೆ ರಮೇಶನು ತನ್ನ ತಂಗಿಯ ಮನೆಯಲ್ಲಿ ನೆಲೆಸಲು ಪ್ರಾರಂಭಿಸಿದ. ರೇಖಾ ಆರ್ಥಿಕವಾಗಿ ತನ್ನ ಗಂಡನನ್ನು ಅವಲಂಬಿಸಿದ್ದು, ತನ್ನ ಹೆಣ್ಣು ಮಗುವಿಗೆ ಊಟ ಮತ್ತು ವಿದ್ಯಾಭ್ಯಾಸ ಒದಗಿಸಲು ಸಾಧ್ಯವಿಲ್ಲದೆ ಮಂಗಳೂರಿನ ಮ್ಯಾಜಿಸ್ಟ್ರೇಟ್ ನ್ಯಾಯಾಲಯದಲ್ಲಿ ತನಗೆ ನ್ಯಾಯ ದೊರಕಿಸುವಂತೆ ಅರ್ಜಿ ಸಲ್ಲಿಸಿರುತ್ತಾಳೆ.

ಈ ಅರ್ಜಿಯ ವಿಚಾರಣೆಯ ನಂತರ ನ್ಯಾಯಾಲಯವು ರೇಖಾಳ ಪರ ಆದೇಶ ಹೊರಡಿಸಿರುತ್ತದೆ. ಈ ಆದೇಶದ ಅನ್ವಯ ರಮೇಶನು ರೇಖಾಳಿಗೆ ಪ್ರತೀ ತಿಂಗಳು ರೂಪಾಯಿ 5,000/– ಆಕೆಯ ಜೀವಿತಾವಧಿಯವರೆಗೆ ನೀಡುವಂತೆ ಮತ್ತು ರೂಪಾಯಿ 4,00,000/– ಆಕೆಗೆ ಪರಿಹಾರವಾಗಿ ನೀಡುವಂತೆ ಆದೇಶ ಹೊರಡಿಸಿದೆ. ಅಲ್ಲದೆ ಹೆಣ್ಣು ಮಗಳನ್ನು ಯಾವುದೇ ಕಾರಣಕ್ಕೂ ತಾಯಿಯಿಂದ ದೂರ ಮಾಡದಂತೆ ಮಗಳ ಸುಪರ್ದಿಯ ಆದೇಶ ಹೊರಡಿಸಿದೆ.

**ಮೌಲ್ಯಮಾಪನ**

1. ಕುಟುಂಬದ ಮನೆ ಎಂದರೆ ತವರು ಮನೆ ಮಾತ್ರ (ತಪ್ಪು)
2. ದೌರ್ಜನ್ಯಕ್ಕೆ ಒಳಗಾದ ಮಹಿಳೆಯೇ ದೂರು ಕೊಡಬೇಕು. (ತಪ್ಪು)
3. ದೌರ್ಜನ್ಯಕ್ಕೆ ಒಳಗಾದ ಮಹಿಳೆಯ ಪ್ರಕರಣವನ್ನು ಪೊಲೀಸರು ಸಾಂತ್ವನ ನೀಡಿ, ಸಂಧಾನ ಮಾಡಿ ಸರಿಪಡಿಸಬಹುದು.( ತಪ್ಪು)
4. ಕಾಯ್ದೆಯಡಿಯಲ್ಲಿ ಕೌಟುಂಬಿಕ ದೌರ್ಜನ್ಯ ಪ್ರಕರಣವನ್ನು 60 ದಿನದೊಳಗೆ ಇತ್ಯರ್ಥಗೊಳಿಸಬೇಕು. (ಸರಿ)
5. ಕೌಟುಂಬಿಕ ದೌರ್ಜನ್ಯ ಖಾಸಗಿ ವಿಚಾರವಾಗಿದೆ. (ತಪ್ಪು)
6. ಕಾಯ್ದೆಯಲ್ಲಿ ರಕ್ಷಣಾ ಅಧಿಕಾರಿಗೆ ಹೆಚ್ಚಿನ ಜವಾಬ್ದಾರಿಯಿದೆ. (ಸರಿ)
7. ಕೌಟುಂಬಿಕ ದೌರ್ಜನ್ಯ ತಡೆ ಕಾಯ್ದೆಯು ಕುಟುಂಬದೊಳಗೆ ಮಹಿಳೆಯರ ಮೇಲೆ ಪುರುಷರು ನಡೆಸುವ ಹಿಂಸೆಯಿಂದ ರಕ್ಷಣೆಯನ್ನು ಒದಗಿಸುತ್ತದೆ. (ಸರಿ)
8. ಗಂಡ ತನ್ನ ಹೆಂಡತಿಯನ್ನು ನೀನು ನೋಡಲು ಚೆನ್ನಾಗಿಲ್ಲ ಎಂದು ಹೇಳುವುದು ಕೌಟುಂಬಿಕ ದೌರ್ಜನ್ಯವಾಗುತ್ತದೆ. (ಸರಿ)
9. ನ್ಯಾಯಾಲಯದ ರಕ್ಷಣಾ ಆದೇಶವನ್ನು ಪೊಲೀಸ್ ಅಧಿಕಾರಿಗಳು ಪಾಲಿಸದಿದ್ದಲ್ಲಿ ಅವರ ಮೇಲೂ ಕ್ರಮ ಕೈಗೊಳ್ಳಬಹುದು. (ಸರಿ)
10. ಕೌಟುಂಬಿಕ ಘಟನಾ ವರದಿಯನ್ನು ರಕ್ಷಣಾ ಅಧಿಕಾರಿಗಳು ನ್ಯಾಯಾಲಯಕ್ಕೆ ಸಲ್ಲಿಸಬೇಕು. (ಸರಿ)

# ವರದಕ್ಷಿಣೆ ನಿಷೇಧ ಕಾಯ್ದೆ 1961

ವರದಕ್ಷಿಣೆ ಕೇಳುವುದು, ವರದಕ್ಷಿಣೆಯ ಕಾರಣವಾಗಿ ಆಗಾಗ ಹಿಂಸೆ ಕೊಡುವುದು ಆರ್ಥಿಕ ಹಿಂಸೆಯಾಗಿದ್ದು, ಕೌಟುಂಬಿಕ ಹಿಂಸೆ ತಡೆ ಕಾಯ್ದೆಯಡಿ ದೂರನ್ನು ನೀಡಬಹುದಾಗಿದೆ. ಅಲ್ಲದೆ ವರದಕ್ಷಿಣೆ ಕಾಯ್ದೆಯಡಿಯೂ ದೂರನ್ನು ನೀಡಬಹುದಾಗಿದೆ.

'ವರದಕ್ಷಿಣೆ ನಿಷೇಧ ಕಾಯ್ದೆ ಜಾರಿಗೆ ಬಂದು 60 ವರ್ಷ ಕಳೆದರೂ ಅದೊಂದು ಕೇವಲ ಕಾಗದದ ಹುಲಿಯಾಗಿಯೇ ಉಳಿದಿದೆ. ಹೆಣ್ಣು ಹೆತ್ತವರು ಸಾವಿಗೀಡಾದ ಹೆಣ್ಣುಮಕ್ಕಳ ಬಗ್ಗೆ ಕಣ್ಣೀರುಗರೆಯುತ್ತಿದ್ದರೆ, ಗಂಡಿನ ಮನೆಯವರು ಹುಡುಗಿಯರ ಮನೆಯಿಂದ ಬಾಚಿಕೊಳ್ಳಬಹುದಾದ ಸಾಮಾನುಗಳನ್ನು ಪಟ್ಟಿ ಮಾಡುತ್ತಿರುತ್ತಾರೆ.

60 ವರ್ಷಕ್ಕಿಂತ ಹಿಂದೆಯೇ ವರದಕ್ಷಿಣೆ ಸಾಮಾಜಿಕ ಪಿಡುಗಾಗಿ ಬೆಳೆಯುವ ಸೂಚನೆಗಳು ಕಂಡುಬಂದಿದ್ದವು. ಇದನ್ನು ತಡೆಗಟ್ಟುವುದಕ್ಕಾಗಿಯೇ 1961ರಲ್ಲಿ ವರದಕ್ಷಿಣೆ ನಿಷೇಧ ಕಾಯ್ದೆಯು ಜಾರಿಗೆ ಬಂದಿತು. ಈ ಕಾಯ್ದೆಯ ಪ್ರಕಾರ ವರದಕ್ಷಿಣೆ ಎಂದರೆ, 'ಮದುವೆಯ ಸಂದರ್ಭದಲ್ಲಿ ಹೆಣ್ಣಿನ ಕಡೆಯವರು ಗಂಡಿನ ಕಡೆಯವರಿಗೆ ಕೊಡುವ/ ಕೊಡುತ್ತೇವೆಂದು ಒಪ್ಪಿಕೊಳ್ಳುವ ಯಾವುದೇ ಬೆಲೆ ಬಾಳುವ ಸಂಪತ್ತು, ಆಸ್ತಿ. ಆದರೆ ಮದುವೆಯ ಸಮಯದಲ್ಲಿ ಕೊಡುವ ಉಡುಗೊರೆಗಳು ಈ ವ್ಯಾಪ್ತಿಯಲ್ಲಿ ಬರುವುದಿಲ್ಲ.

'ವರದಕ್ಷಿಣೆ ಕಾನೂನು' ಅತಿ ಸ್ಪಷ್ಟವಾಗಿ ವರದಕ್ಷಿಣೆ ಕೇಳುವುದು/ ಕೊಡುವುದು/ ತೆಗೆದುಕೊಳ್ಳುವುದು ಶಿಕ್ಷಾರ್ಹ ಅಪರಾಧವೆಂದು ಪರಿಗಣಿಸಿದೆ. ಈ ಅಪರಾಧಕ್ಕೆ ಐದು ವರ್ಷ ಕಾರಾಗೃಹವಾಸ, ರೂ. 15,000 ಅಥವಾ ವರದಕ್ಷಿಣೆ ಮೊತ್ತದಷ್ಟೇ ಹಣವನ್ನು ದಂಡವನ್ನಾಗಿ ವಿಧಿಸಬಹುದಾಗಿದೆ. ಅಲ್ಲದೆ, ವರದಕ್ಷಿಣೆ ತೆಗೆದುಕೊಳ್ಳುವ ಅಥವಾ ಕೊಡುವ ಬಗ್ಗೆ ಮಾಡಿಕೊಳ್ಳುವ ಕರಾರು ಪತ್ರವನ್ನು ಅಸಿಂಧು ಎಂದು ಪರಿಗಣಿಸಲಾಗಿದೆ. ಗಂಡಿನ ಸಂಬಂಧಿಕರು ಪ್ರತ್ಯಕ್ಷ ಅಥವಾ ಪರೋಕ್ಷವಾಗಿ ಹೆಣ್ಣಿನ ಸಂಬಂಧಿಕರಿಂದ ವರದಕ್ಷಿಣೆ ಕೇಳಿದರೆ ಅವರೂ ಶಿಕ್ಷೆಗೆ ಗುರಿಯಾಗುತ್ತಾರೆ.

ಒಂದು ವೇಳೆ ಈಗಾಗಲೇ ವರದಕ್ಷಿಣೆ ಕೊಟ್ಟಿದ್ದರೆ ಅದನ್ನು ಮೂರು ತಿಂಗಳೊಳಗೆ ಆ ಹೆಣ್ಣಿನ ಹೆಸರಿಗೆ ವರ್ಗಾಯಿಸಬೇಕು. ಇಲ್ಲದಿದ್ದರೆ ಶಿಕ್ಷೆಯಾಗುತ್ತದೆ. ಅಕಸ್ಮಾತ್ ಅವಳು ಸತ್ತರೆ ಅದು ಅವಳ ವಾರಸುದಾರರಿಗೆ ಸೇರುತ್ತದೆ.

ಈ ಕಾನೂನಿದ್ದರೂ ನಮ್ಮ ಸಮಾಜದಲ್ಲಿ ವರದಕ್ಷಿಣೆ ಕಿರುಕುಳ, ಸಾವುಗಳು ಏರುತ್ತಲೇ ಇರುವುದನ್ನು ಮನಗಂಡ ಮಹಿಳಾ ಸಂಘಟನೆಗಳು ಹೋರಾಟ ನಡೆಸಿ ವರದಕ್ಷಿಣೆ ಕಿರುಕುಳ, ಸಾವುಗಳ ಪ್ರಕರಣಗಳ ಬಗ್ಗೆ ಜನರ/ ಸರ್ಕಾರದ ಗಮನ ಸೆಳೆದವು. ಇದರ ಫಲವಾಗಿ ಭಾರತ ದಂಡಸಂಹಿತೆ ಮತ್ತು ಭಾರತೀಯ ಸಾಕ್ಷ್ಯಅಧಿನಿಯಮದಲ್ಲಿ ತಿದ್ದುಪಡಿ ತಂದಿತು. ಈ ತಿದ್ದುಪಡಿ ಕಾಯ್ದೆಯಲ್ಲಿ 498ಎ ಸೆಕ್ಷನ್ ಅನ್ನು ಹೊಸದಾಗಿ ಸೇರಿಸಲಾಯಿತು. ಇದರ ಪ್ರಕಾರ, ಗಂಡ ಅಥವಾ ಗಂಡನ ಸಂಬಂಧಿಕರು ಹೆಂಡತಿ ಅಥವಾ ಸೊಸೆಯನ್ನು ದೈಹಿಕವಾಗಿ ಅಥವಾ ಮಾನಸಿಕವಾಗಿ ಹಿಂಸಿಸಿದರೆ (ಅಂದರೆ ಅವಳನ್ನು ಅಥವಾ ಅವಳ ಮನೆಯವರನ್ನು ದೂಷಿಸಿ ಹಂಗಿಸಿ ಮಾತನಾಡುವುದು, ಅವಳು ಮಾಡುವ ಕೆಲಸದ ಬಗ್ಗೆ ಅತೃಪ್ತಿ ವ್ಯಕ್ತಪಡಿಸುವುದು, ವಿನಾಕಾರಣ ಬೈಯುವುದು, ಹೊಡೆಯುವುದು, ಊಟ ಕೊಡದಿರುವುದು ಇತ್ಯಾದಿ) ಈ ಅಪರಾಧಕ್ಕಾಗಿ ಮೂರು ವರ್ಷ ಜೈಲು ಶಿಕ್ಷೆ ಮತ್ತು ದಂಡವನ್ನು ವಿಧಿಸಲಾಗುತ್ತದೆ. ಇಂತಹ ಅಪರಾಧಗಳ ಬಗ್ಗೆ ಹೆಣ್ಣು ಮಕ್ಕಳು ಪೋಲೀಸ್ ಠಾಣೆಗೆ ದೂರು ಕೊಟ್ಟರೆ, ಅಪರಾಧಿಗಳನ್ನು ವಾರಂಟ್ ಇಲ್ಲದೆಯೇ ಬಂಧಿಸಬಹುದಾಗಿದೆ. ಹಾಗೂ ಈ ಅಪರಾಧಕ್ಕೆ ಜಾಮೀನು ದೊರೆಯುವುದಿಲ್ಲ. ಇದು ಕಾನೂನಿನ ಅನುಷ್ಠಾನ ಪ್ರಕ್ರಿಯೆಯನ್ನು ಬಿಗಿಗೊಳಿಸಿತು. ಪೋಲೀಸ್ ಅಧಿಕಾರಿಗಳ ಕೈಗಳನ್ನು ಹೆಚ್ಚು ಬಲಗೊಳಿಸಿತು. 1986ರಲ್ಲಿ ಜಾರಿಗೆ ತಂದ ಮತ್ತೊಂದು ತಿದ್ದುಪಡಿಯ ಪ್ರಕಾರ ಯಾವುದೇ ಹೆಂಗಸು ಮದುವೆಯಾದ ಏಳು ವರ್ಷಗಳೊಳಗೆ ಅನುಮಾನಾಸ್ಪದ ರೀತಿಯಲ್ಲಿ (ಸುಟ್ಟಗಾಯ, ಆತ್ಮಹತ್ಯೆ ಇತ್ಯಾದಿ) ಸಾವಿಗೀಡಾದರೆ, ಅಂತಹ ಸಾವಿಗೆ ಆಕೆಯ ಗಂಡ, ಗಂಡನ ಸಂಬಂಧಿಕರು ವರದಕ್ಷಿಣೆ ಅಥವಾ ಬೇರಾವುದೇ ಕಾರಣಕ್ಕೆ ನೀಡಿದ ಕಿರುಕುಳವೇ ಕಾರಣ ಎನ್ನುವುದು ತಿಳಿದು ಬಂದಲ್ಲಿ, ಅಂತಹ ಸಾವುಗಳನ್ನು 'ವರದಕ್ಷಿಣೆ ಸಾವು' ಎಂದು ಪರಿಗಣಿಸಲಾಗುತ್ತದೆ. ಇಂತಹ ಅಪರಾಧಕ್ಕೆ ಏಳು ವರ್ಷಗಳಿಂದ, ಜೀವಾವಧಿ ಶಿಕ್ಷೆಯನ್ನು ವಿಧಿಸಬಹುದಾಗಿದೆ. ಇಂತಹ ಸಂಶಯಾಸ್ಪದ ಸಾವುಗಳನ್ನು ಮಹಜರ್ ಮಾಡುವ ಅಧಿಕಾರ ತಾಲೂಕು ದಂಡಾಧಿಕಾರಿ(ತಹಶೀಲ್ದಾರ್)ಗಳಿಗೆ ಇರುತ್ತದೆ. ಇಲ್ಲಿ ಆರೋಪಿಯು ತಾನು ಅಪರಾಧ ಮಾಡಿಲ್ಲವೆಂದು ಸಾಬೀತುಪಡಿಸಬೇಕಾಗುತ್ತದೆ.(ಸಾಮಾನ್ಯವಾಗಿ, ನ್ಯಾಯಾಲಯದಲ್ಲಿ ಆರೋಪಿಯ ಅಪರಾಧವನ್ನು ಸಾಬೀತುಪಡಿಸುವ ಹೊಣೆ ಪೋಲೀಸರದ್ದು / ದೂರು ಕೊಟ್ಟವರದ್ದು)

**ಯಾರು ದಾವೆ ಹೂಡಬಹುದು?**

- ತೊಂದರೆಗೊಳಗಾದ ಹೆಂಗಸು, ತಂದೆ, ತಾಯಿ, ಸಂಬಂಧಿಕರು
- ಪೋಲೀಸ್ ಆಫೀಸರ್ ಅಥವಾ ಯಾವುದೇ ನ್ಯಾಯಾಲಯ ತನ್ನ ಗಮನಕ್ಕೆ ಬಂದಂತಹ ಪ್ರಕರಣಗಳಿಗೆ ಸಂಬಂಧಪಟ್ಟಂತೆ ಕ್ರಮ ತೆಗೆದುಕೊಳ್ಳಬಹುದು.
- ಯಾವುದೇ ನೋಂದಾಯಿತ ಸಂಘಸಂಸ್ಥೆಗಳು
- ಮಾಡಿದ ದಾವೆಯನ್ನು ರಾಜಿಯಿಂದ ಹಿಂದಕ್ಕೆ ತೆಗೆಯುವಂತಿಲ್ಲ.

**'ವರದಕ್ಷಿಣೆ' ಸಾವಿನ ಪ್ರಕರಣಗಳು ಸೋಲಲು ಕಾರಣಗಳು**

- ಘಟನೆ ನಡೆದ ಕೂಡಲೇ ದೂರು ನೀಡದಿರುವುದು.
- ಸಾಕ್ಷಿ–ಪುರಾವೆಗಳ ನಾಶ: ಘಟನೆ ನಡೆದ ಸ್ಥಳದಲ್ಲಿ ಅದಕ್ಕೆ ಸಂಬಂಧಿಸಿದ ವಸ್ತುಗಳು ಯಥಾಸ್ಥಿತಿಯಲ್ಲಿರುವಂತೆ ನೋಡಿಕೊಳ್ಳಬೇಕಾಗುತ್ತದೆ. ಆದರೆ ಸಾಮಾನ್ಯವಾಗಿ ವರದಕ್ಷಿಣೆ ಸಾವಿನ ಪ್ರಕರಣಗಳು ಗಂಡನ ಮನೆಯಲ್ಲಿ ನಡೆಯುವುದೇ ಹೆಚ್ಚು. ಸೀಮೆ ಎಣ್ಣೆ ಹಾಕಿ ಸುಟ್ಟು, ಸ್ಟೌ ಸಿಡಿದು ಸತ್ತಳೆಂದೋ, ಆತ್ಮಹತ್ಯೆ ಮಾಡಿಕೊಂಡಳೆಂದೋ ಜನರನ್ನು ನಂಬಿಸಿಬಿಡುತ್ತಾರೆ. ಎಷ್ಟೋ ವೇಳೆ ತಾಯಿ ಮನೆಯವರು ಬರುವ ಮೊದಲೇ ಹೆಣವನ್ನು ಸುಟ್ಟು ಹಾಕಿಬಿಡುತ್ತಾರೆ. ಅಲ್ಲದೆ ಹೆಣ್ಣು ಮಕ್ಕಳು ಸಾವಿನಂಚಿನಲ್ಲಿರುವಾಗ ಆಕೆಯನ್ನು ಬೆದರಿಸಿಯೋ, ಮಕ್ಕಳನ್ನು ಚೆನ್ನಾಗಿ ನೋಡಿಕೊಳ್ಳುವ ಭರವಸೆ ನೀಡಿಯೋ ಆಕೆಯಿಂದ ನಿಜಾಂಶ ಹೊರಬರದಂತೆ ಮಾಡುತ್ತಾರೆ.
- ತನಿಖಾ ವೈಫಲ್ಯ: ಪೋಲೀಸರು ಸರಿಯಾಗಿ ಹೇಳಿಕೆಗಳನ್ನು ತೆಗೆದುಕೊಳ್ಳದೇ, ಸ್ಥಳ ತನಿಖೆ, ಮಹಜರ್ ಮಾಡದೆ, ಬೇಜವಾಬ್ದಾರಿಯಿಂದ ವರ್ತಿಸುವ ಸಾಧ್ಯತೆಗಳಿರುತ್ತವೆ. ಕೆಲವೊಮ್ಮೆ ಗಂಡನ ಮನೆಯವರ ಒತ್ತಡದಿಂದಾಗಿ, ರಾಜಕೀಯ ಒತ್ತಡದಿಂದಾಗಿ ಸರಿಯಾದ ತನಿಖೆಯನ್ನು ನಡೆಸದಿರುವುದರಿಂದ ಪ್ರಕರಣ ವಿಫಲವಾಗುತ್ತದೆ.
- ಘಟನೆಯ ಮೊದಲು ಆಕೆ ಗೆಳತಿ/ ತಾಯಿ ಮನೆಯವರಿಗೆ ಬರೆದ ಕಾಗದಗಳಿದ್ದರೆ, ಹೇಳಿಕೆಗಳಿದ್ದರೆ ಅವುಗಳನ್ನು ಕಾಪಾಡದಿರುವುದು ಅಥವಾ ಹೇಳದೇ ಮುಚ್ಚಿಡುವುದು.
- ನೆರೆಕರೆಯವರು ಸಾಕ್ಷಿ ಹೇಳಲು ನಿರಾಕರಿಸುವುದು.

**ಮರಣ ಕಾಲದ ಹೇಳಿಕೆ:** ವ್ಯಕ್ತಿಯು ತನ್ನ ಮರಣ ಕಾಲದಲ್ಲಿ ತನ್ನ ಮರಣದ ಕಾರಣದ ಬಗ್ಗೆ ಕೊಡುವ ಹೇಳಿಕೆಯನ್ನು 'ಮರಣ ಕಾಲದ ಹೇಳಿಕೆ' ಎನ್ನುತ್ತಾರೆ. ಈ ಮರಣ ಕಾಲದಲ್ಲಿ ಹೇಳಿಕೆಯನ್ನು ಕೊಡಬೇಕಾದರೆ ವೈದ್ಯಾಧಿಕಾರಿಗಳು ಸಮೀಪದ ದಂಡಾಧಿಕಾರಿ (ಮಾಜಿಸ್ಟ್ರೇಟ್, ಕಾರ್ಯಾಂಗ ಮ್ಯಾಜಿಸ್ಟ್ರೇಟ್ ಆದ ಉಪ ವಿಭಾಗಾಧಿಕಾರಿ ಹಾಗೂ ತಹಶೀಲ್ದಾರ್ ಸೇರಿಸಿ)ಯವರಿಗೆ ತಿಳಿಸುತ್ತಾರೆ. ಇವರ ಎದುರು ನೀಡಿದ ಹೇಳಿಕೆಗೆ ಮೊದಲ ಸ್ಥಾನ. ವೈದ್ಯಾಧಿಕಾರಿಗಳು ಅಥವಾ ಪೋಲೀಸ್ ಅಧಿಕಾರಿಗಳ ಎದುರು ನೀಡಿದ ಹೇಳಿಕೆಗೆ ಎರಡನೇ ಸ್ಥಾನ ಸಂಬಂಧಿಕರು, ತಂದೆ, ತಾಯಿ ಎದುರು ನೀಡಿದ ಹೇಳಿಕೆಗಳಿಗೆ ಮೂರನೇ ಸ್ಥಾನವಿದೆ. ಇಂತಹ ಹೇಳಿಕೆಗಳು ಲಿಖಿತ ರೂಪದಲ್ಲಿರಬೇಕು ಹಾಗೂ ಸಾವಿಗೀಡಾದ ವ್ಯಕ್ತಿಯ ಸಹಿ ಇರಬೇಕು. ಈ ಮರಣ ಕಾಲದ ಹೇಳಿಕೆಗಳನ್ನು ಪ್ರಬಲ ಸಾಕ್ಷಿಯಾಗಿ ನ್ಯಾಯಾಲಯ ಪರಿಗಣಿಸುತ್ತದೆ.

**ತೆಗೆದುಕೊಳ್ಳಬೇಕಾದ ಕ್ರಮಗಳು**

- ಯಾವುದೇ ರೀತಿಯ ಹಿಂಸೆಯಿಂದ ಸತ್ತಿರಲಿ, ತಕ್ಷಣವೇ ಸಂಬಂಧಪಟ್ಟವರು ದೂರು ಕೊಡಬೇಕು.
- ಶವವನ್ನು ಸುಡದೆ ಹೂಳುವುದು ಒಳ್ಳೆಯದು. ಅಗತ್ಯ ಬಿದ್ದರೆ ಮತ್ತೆ ಶವವನ್ನು ಹೊರತೆಗೆದು ತನಿಖೆ ಮಾಡಿಸಬಹುದು.
- ಮರಣ ಹೊಂದಿದವರು ತನಗಾಗುತ್ತಿರುವ ಹಿಂಸೆಯ ಬಗ್ಗೆ ತಂದೆ/ ತಾಯಿ/ ಗೆಳತಿಯರಿಗೆ ಪತ್ರಗಳನ್ನು ಬರೆದಿದ್ದರೆ ಅವೆಲ್ಲವನ್ನೂ ರಕ್ಷಿಸಿಡಬೇಕು.
- ದೂರು ಕೊಡುವಾಗ ಸ್ಥಳೀಯ ಮಹಿಳಾ ಸಂಘಸಂಸ್ಥೆಗಳಿಗೆ ಒಂದು ಪ್ರತಿಯನ್ನು ಕಳುಹಿಸಿಕೊಡುವುದು ಒಳ್ಳೆಯದು.

# ಲೈಂಗಿಕ ಅಪರಾಧಗಳಿಂದ ಮಕ್ಕಳ ರಕ್ಷಣಾ ಕಾಯ್ದೆ 2012 ಮತ್ತು ತಿದ್ದುಪಡಿ 2019

## ಪ್ರಸ್ತಾವನೆ

'ಲೈಂಗಿಕ ಶೋಷಣೆಯಿಂದ ಮಕ್ಕಳನ್ನು ಹೇಗೆ ರಕ್ಷಿಸಬೇಕು' ಎನ್ನುವುದು ಇತ್ತೀಚಿನ ದಿನಗಳಲ್ಲಿ ಅತ್ಯಂತ ಹೆಚ್ಚು ಸವಾಲಾಗುತ್ತಿರುವ ವಿಚಾರ. ಇದು ಕೇವಲ ಹೆಣ್ಣು ಮಕ್ಕಳಿಗೆ ಮಾತ್ರ ಸೀಮಿತವಾಗಿಲ್ಲ. ಗಂಡು ಮಕ್ಕಳಿಗೂ ಅಷ್ಟೇ ಪ್ರಸ್ತುತ. ಮಕ್ಕಳ ಲೈಂಗಿಕ ಪ್ರಕರಣಗಳು ಬೆಳಕಿಗೆ ಬರುವುದು ಕೇವಲ 3ರಿಂದ 5 ಪ್ರತಿಶತ ಮಾತ್ರ. ಮಕ್ಕಳ ಮೇಲೆ ನಡೆಯುವ ಈ ಲೈಂಗಿಕ ಶೋಷಣೆಯ ಪ್ರಕರಣಗಳು ಬಹುತೇಕ ಮುಚ್ಚಿ ಹಾಕಲ್ಪಡುತ್ತವೆ. ಮಕ್ಕಳ ಆರೋಗ್ಯಕರ ಬೆಳವಣಿಗೆಗೆ ಪೂರಕ ವಾತಾವರಣ ಸೃಷ್ಟಿಸುವುದು ಮಕ್ಕಳ ಭವಿಷ್ಯದ ದೃಷ್ಟಿಯಿಂದ ಅತ್ಯಗತ್ಯವಾಗಿದೆ ಎಂದೇ ಲೈಂಗಿಕ ಅಪರಾಧಗಳಿಂದ ಮಕ್ಕಳ ರಕ್ಷಣಾ ಕಾಯ್ದೆ – 2012ನ್ನು ಸರಕಾರ ಅನುಷ್ಠಾನಕ್ಕೆ ತಂದಿದ್ದು, 2019ರಲ್ಲಿ ಕಾಯ್ದೆಯು ತಿದ್ದುಪಡಿಗೊಂಡಿರುತ್ತದೆ.

## ಕಾಯ್ದೆಯಡಿ ಮಗು ಎಂದರೆ

ಮಗು ಎಂದರೆ 18 ವರ್ಷ ಕೆಳಗಿನ ಗಂಡು ಅಥವಾ ಹೆಣ್ಣು ಮಗು.

## ಲೈಂಗಿಕ ಅಪರಾಧಗಳು ಮತ್ತು ಶಿಕ್ಷೆಯ ಪ್ರಮಾಣ

### ತೂರಿಸುವ ಮೂಲಕ ಲೈಂಗಿಕ ದೌರ್ಜನ್ಯ(ಭೇದಕ ಲೈಂಗಿಕ ದೌರ್ಜನ್ಯ)

ಯಾವುದೇ ಒಂದು ಮಗುವಿನ ಯೋನಿ, ಬಾಯಿ, ಗುದದ್ವಾರಕ್ಕೆ ಶಿಶ್ನ ಅಥವಾ ಯಾವುದೇ ಇತರ ವಸ್ತುವನ್ನು ತೂರಿಸಿದರೆ ಅಥವಾ ದೇಹದ ಯಾವುದೇ ಭಾಗವನ್ನು ದುರುಪಯೋಗಪಡಿಸಿ ತೂರಿಸುವಿಕೆಯನ್ನು ಸಾಧ್ಯಮಾಡಿದರೆ, ಅದು ಭೇದಕ ಲೈಂಗಿಕ ದೌರ್ಜನ್ಯ ಎನಿಸಿಕೊಳ್ಳುವುದು. ಇಂತಹ ಅಪರಾಧ ಎಸಗಿದವರು ಕನಿಷ್ಠ 10 ವರ್ಷ ಜೈಲು ಶಿಕ್ಷೆಯಿಂದ ಜೀವಾವಧಿವರೆಗಿನ ಶಿಕ್ಷೆಗೆ ಮತ್ತು ದಂಡಕ್ಕೆ ಒಳಗಾಗುವರು.

### ತೀವ್ರತರ (ಘೋರ) ತೂರಿಸುವ ಮೂಲಕ ಲೈಂಗಿಕ ದೌರ್ಜನ್ಯ (ತೀವ್ರತರ ಭೇದಕ ಲೈಂಗಿಕ ದೌರ್ಜನ್ಯ)

ಅಪರಾಧವನ್ನು ಅಧಿಕಾರದಲ್ಲಿರುವ ವ್ಯಕ್ತಿಗಳು, ನಂಬಿಗಸ್ಥ ವ್ಯಕ್ತಿಗಳು ಅಪರಾಧ ಎಸಗಿದರೆ ಅದು ತೀವ್ರತರ ತೂರಿಸುವ ಮೂಲಕ ಲೈಂಗಿಕ ದೌರ್ಜನ್ಯ (ಘೋರ ತೂರಿಸುವ ಮೂಲಕ ಲೈಂಗಿಕ ದೌರ್ಜನ್ಯ) ಎನಿಸಿಕೊಳ್ಳುವುದು. ಇಂತಹ ಅಪರಾಧ ಎಸಗಿದವರಿಗೆ ಕನಿಷ್ಠ 20 ವರ್ಷಗಳಿಂದ ಜೀವಾವಧಿವರೆಗಿನ ಶಿಕ್ಷೆ ಮತ್ತು ದಂಡ ಅಥವಾ ಮರಣ ದಂಡನೆ ವಿಧಿಸಬಹುದು.

ಅಧಿಕಾರದಲ್ಲಿರುವ ವ್ಯಕ್ತಿಗಳು ಮತ್ತು ನಂಬಿಗಸ್ಥ ವ್ಯಕ್ತಿಗಳು ಎಂದರೆ ಯಾರು ?

- ಪೊಲೀಸ್ ಅಧಿಕಾರಿ
- ಭದ್ರತಾ ಅಧಿಕಾರಿ
- ಸರಕಾರಿ ನೌಕರ, ಸೆರೆಮನೆಯ ಅಧಿಕಾರಿ, ಮಕ್ಕಳ ರಕ್ಷಣೆಯ ಜವಾಬ್ದಾರಿ ಹೊತ್ತಿರುವ ವ್ಯಕ್ತಿ
- ಆಸ್ಪತ್ರೆಯ ಸಿಬ್ಬಂದಿ, ಧಾರ್ಮಿಕ ಮುಖಂಡರು, ಶಿಕ್ಷಕರು
- ಕುಟುಂಬದ ಸದಸ್ಯರು

## ಲೈಂಗಿಕ ದೌರ್ಜನ್ಯ

ಲೈಂಗಿಕ ಉದ್ದೇಶದಿಂದ ಯಾವುದೇ ವ್ಯಕ್ತಿಯು ಮಗುವಿನ ಯೋನಿ, ಶಿಶ್ನ, ಮೊಲೆಗಳನ್ನು ಸ್ಪರ್ಶಿಸುವುದು ಅಥವಾ ಮಕ್ಕಳಿಂದ ತನ್ನ ದೇಹದ ಭಾಗಗಳನ್ನು ಮುಟ್ಟಿಸಿಕೊಳ್ಳುವುದನ್ನು 'ಲೈಂಗಿಕ ದೌರ್ಜನ್ಯ' ಎಂದು ಕರೆಯಲಾಗುವುದು. ಈ ದೌರ್ಜನ್ಯ ಎಸಗಿದವರಿಗೆ 3 ವರ್ಷದಿಂದ 5 ವರ್ಷಗಳವರೆಗೆ ಸೆರೆವಾಸ ಹಾಗೂ ದಂಡ ವಿಧಿಸಲಾಗುವುದು.

**ತೀವ್ರತರ(ಘೋರ) ಲೈಂಗಿಕ ದೌರ್ಜನ್ಯ**

ಅಧಿಕಾರದಲ್ಲಿರುವ ವ್ಯಕ್ತಿಗಳು, ನಂಬಿಗಸ್ಥ ವ್ಯಕ್ತಿಗಳು ಲೈಂಗಿಕ ದೌರ್ಜನ್ಯವೆಸಗಿದರೆ ಅದನ್ನು 'ತೀವ್ರತರ ಲೈಂಗಿಕ ದೌರ್ಜನ್ಯ' ಎಂದು ಕರೆಯಲಾಗುವುದು. ಈ ದೌರ್ಜನ್ಯ ಎಸಗಿದವರಿಗೆ 5 ವರ್ಷದಿಂದ 7 ವರ್ಷಗಳವರೆಗೆ ಸೆರೆವಾಸ ಹಾಗೂ ದಂಡ ವಿಧಿಸಲಾಗುವುದು.

**ಲೈಂಗಿಕ ಕಿರುಕುಳ**

ಲೈಂಗಿಕ ಉದ್ದೇಶದಿಂದ ಶಬ್ದ ಮಾಡುವ ಮೂಲಕ ಯಾವುದೇ ಮಗುವಿನ ಗಮನ ಸೆಳೆದರೆ, ಅಸಭ್ಯವಾಗಿ ವರ್ತಿಸಿದರೆ, ತನ್ನ ದೇಹ ಪ್ರದರ್ಶನ ಮಾಡಿದರೆ, ಮಗುವನ್ನು ನೇರವಾಗಿ ಅಥವಾ ವಿದ್ಯುನ್ಮಾನ ಮಾಧ್ಯಮದ ಮೂಲಕ ಸಂಪರ್ಕಿಸಲು ಪ್ರಯತ್ನಿಸಿದರೆ ಅಥವಾ ಮಗುವಿಗೆ ಭಯ ಹುಟ್ಟಿಸಿದರೆ, ಅದನ್ನು 'ಲೈಂಗಿಕ ಕಿರುಕುಳ' ಎಂದು ಕರೆಯಲಾಗುವುದು. ಈ ಕಿರುಕುಳ ನಡೆಸಿದವರಿಗೆ ಮೂರು ವರ್ಷಗಳವರೆಗಿನ ಸೆರೆವಾಸ ಹಾಗೂ ದಂಡ, ವಿಧಿಸಲಾಗುವುದು.

**ಮಕ್ಕಳನ್ನು ಅಶ್ಲೀಲ ಚಿತ್ರೀಕರಣಕ್ಕೆ ಬಳಸುವುದು**

ಮಗುವನ್ನು ಯಾವುದೇ ರೀತಿಯಲ್ಲಿ ಅಶ್ಲೀಲ ಚಿತ್ರಗಳ ರಚನೆಗೆ ಬಳಸುವುದು, ಮಗುವಿನ ಅಶ್ಲೀಲ ಚಿತ್ರಗಳನ್ನು ಸಂಗ್ರಹಿಸುವುದು ಮತ್ತು ಮಾರಾಟ ಮಾಡುವುದು, ಇಂತಹ ಅಪರಾಧವೆಸಗಿದಲ್ಲಿ ಅಪರಾಧಿ ಕನಿಷ್ಠ 5 ವರ್ಷಜೈಲು ಶಿಕ್ಷೆ ಮತ್ತು ದಂಡಕ್ಕೆ ಒಳಗಾಗುತ್ತಾರೆ. ಅಪರಾಧಿಯು ಅಪರಾಧವನ್ನು ಮರುಕಳಿಸಿದ ಪಕ್ಷದಲ್ಲಿ ಕನಿಷ್ಠ 7 ವರ್ಷಜೈಲು ಶಿಕ್ಷೆ ಮತ್ತು ದಂಡಕ್ಕೆ ಒಳಗಾಗುತ್ತಾರೆ.

ಯಾವುದೇ ವ್ಯಕ್ತಿಯು ಮಗುವಿನ ಅಶ್ಲೀಲ ಚಿತ್ರೀಕರಣದ ಪರಿಕರಗಳನ್ನು ಮಾಡುವುದು ಮತ್ತು ಇತರರಿಗೆ ಕಳುಹಿಸುವ ಉದ್ದೇಶದಿಂದ ಸಂಗ್ರಹಿಸುವುದು, ಅಳಿಸದಿರುವುದು ಮತ್ತು ನಾಶಪಡಿಸದಿರುವುದು ಮತ್ತು ಸಂಬಂಧಪಟ್ಟ ಪ್ರಾಧಿಕಾರಕ್ಕೆ ಈ ಕುರಿತಾಗಿ ತಿಳಿಸದಿರುವುದು ಇಂತಹ ಅಪರಾಧಕ್ಕೆ ರೂಪಾಯಿ 5,000/- ದಂಡ ಮತ್ತು ಅಪರಾಧವು ಮರುಕಳಿಸಿದರೆ ರೂಪಾಯಿ 10,000/- ದಂಡ ವಿಧಿಸಲಾಗುತ್ತದೆ.

ಯಾವುದೇ ವ್ಯಕ್ತಿಯು ಮಗುವಿನ ಅಶ್ಲೀಲ ಚಿತ್ರೀಕರಣ ಸಂಗ್ರಹಿಸಿ ಅವುಗಳನ್ನು ವರದಿಗಾಗಿ ಅಥವಾ ನ್ಯಾಯಾಲಯದಲ್ಲಿ ಸಾಕ್ಷ್ಯಕ್ಕಾಗಿ ಹೊರತುಪಡಿಸಿ ಪ್ರಸಾರಕ್ಕಾಗಿ ಮಗುವನ್ನು ಬಳಸುವುದು ಮತ್ತು ಇತರರಿಗೆ ಹಂಚುವುದು, ಇಂತಹ ಅಪರಾಧವೆಸಗಿದಲ್ಲಿ ಅಪರಾಧಿಗೆ ಕನಿಷ್ಠ 3 ವರ್ಷಜೈಲು ಶಿಕ್ಷೆ ಅಥವಾ ದಂಡ ಅಥವಾ ಎರಡೂ ಶಿಕ್ಷೆಗೆ ಒಳಗಾಗುತ್ತಾನೆ.

ಯಾವುದೇ ವ್ಯಕ್ತಿಯು ಮಗುವಿನ ಅಶ್ಲೀಲ ಚಿತ್ರೀಕರಣ ಸಂಗ್ರಹಿಸುವುದು ಅಥವಾ ಹೊಂದುವುದು, ಅವುಗಳನ್ನು ವಾಣಿಜ್ಯ ಉದ್ದೇಶಕ್ಕಾಗಿ ಬಳಸುವುದು, ಇಂತಹ ಅಪರಾಧವೆಸಗಿದಲ್ಲಿ ಅಪರಾಧಿಗೆ ಕನಿಷ್ಠ 3 ರಿಂದ 5 ವರ್ಷದ ವರೆಗೆ ಜೈಲು ಶಿಕ್ಷೆ ಅಥವಾ ದಂಡ ಅಥವಾ ಎರಡೂ ಶಿಕ್ಷೆಗೆ ಒಳಗಾಗುತ್ತಾನೆ. ಒಂದು ಪಕ್ಷ ಅಪರಾಧವು ಮರುಕಳಿಸಿದರೆ ಕನಿಷ್ಠ 5 ರಿಂದ 7 ವರ್ಷ ಜೈಲು ಶಿಕ್ಷೆ ಮತ್ತು ದಂಡ ವಿಧಿಸಲಾಗುತ್ತದೆ.

ಈ ಮೇಲಿನ ಎಲ್ಲಾ ಅಪರಾಧಗಳನ್ನು ಮಾಡಲು ಪ್ರಚೋದನೆ ನೀಡಿದ, ಸಹಾಯ ಮಾಡಿದ ಅಥವಾ ಯಾವುದೇ ರೀತಿಯಲ್ಲಿ ಭಾಗಿಯಾದ ಎಲ್ಲರೂ ಅಪರಾಧಿಗಳೆನಿಸುವರು. ಈ ಅಪರಾಧಗಳು ನಡೆದ ಬಗ್ಗೆ ಮಾಹಿತಿ ಇದ್ದು, ಇದಕ್ಕೆ ಸಂಬಂಧಿಸಿ ದೂರು ಕೊಡದವರು ಕೂಡಾ ತಪ್ಪಿತಸ್ಥರು. ನೇರವಾಗಿ ಅಪರಾಧ ಮಾಡಿದವರಿಗೆ ನೀಡುವ ಶಿಕ್ಷೆಯ ಅರ್ಧದಷ್ಟನ್ನು ಇವರು ಅನುಭವಿಸಬೇಕು.

**ಅಪರಾಧಗಳ ತನಿಖಾ ಪ್ರಕ್ರಿಯೆ**

- ಮಕ್ಕಳ ಮೇಲಿನ ಲೈಂಗಿಕ ಅಪರಾಧಗಳ ವರದಿ ಹಾಗೂ ತನಿಖೆ ಮಾಡಲು ವಿಶೇಷವಾದ ಪೊಲೀಸ್ ಘಟಕ ಆರಂಭಿಸಬೇಕು.
- ವಿಶೇಷವಾದ ಪೊಲೀಸ್ ಘಟಕದವರು ತಮಗೆ ಬಂದ ಲೈಂಗಿಕ ಅಪರಾಧಗಳ ದೂರನ್ನು ಕ್ರಮ ಪ್ರಕಾರ ನೋಂದಾಯಿಸಬೇಕು. ಬರಹಗಾರರು ಮಾಹಿತಿ ನೀಡಿದ ವ್ಯಕ್ತಿಗೆ ಮಾಹಿತಿಯನ್ನು ಓದಿ ಹೇಳಿ, ಒಂದು ಪುಸ್ತಕದಲ್ಲಿ ಬರೆದು ಆ ವ್ಯಕ್ತಿಗೆ ನೀಡಬೇಕು. ಬರವಣಿಗೆಯ ಭಾಷೆ ಅರ್ಥವಾಗದಿದ್ದಲ್ಲಿ, ದೂರುದಾರರಿಗೆ ತಿಳಿಯುವ ಭಾಷೆಯಲ್ಲಿ ವಿವರಿಸುವ ವ್ಯಕ್ತಿಯನ್ನು ಗುರುತಿಸಿ ಆಯ್ಕೆ ಮಾಡಬೇಕು, ಅವರಿಗೆ ಸಂಭಾವನೆಯನ್ನೂ ಕೊಡಬೇಕು.

- ಮಗುವಿನ ದೂರನ್ನು ವರದಿ ಮಾಡುವಾಗ ಮಗುವಿನ ಭಾಷೆಯನ್ನೇ ದೂರು ಅರ್ಜಿಯಲ್ಲಿ ಬಳಸಬೇಕು. ಅವಶ್ಯವಿದ್ದಲ್ಲಿ ಭಾಷಾಂತರಿಸಿ ತಿಳಿಸಬೇಕು.
- ವರದಿ ಪಡೆದ 24 ಗಂಟೆಗಳೊಳಗೆ ಮಕ್ಕಳ ಕಲ್ಯಾಣ ಸಮಿತಿಗೆ, ಮಕ್ಕಳ ವಿಶೇಷ ನ್ಯಾಯಾಲಯಕ್ಕೆ, ಒಂದು ವೇಳೆ ಅದು ಇಲ್ಲದಿದ್ದಲ್ಲಿ ಸತ್ರ ನ್ಯಾಯಾಲಯಕ್ಕೆ ಬರೆದು ಕಳುಹಿಸಬೇಕು.
- ಮಗುವಿನ ರಕ್ಷಣೆಯ, ಭದ್ರತೆಯ, ವಸತಿಯ ಮತ್ತು ಆಸ್ಪತ್ರೆಗೆ ದಾಖಲಿಸಬೇಕಾದ ಅವಶ್ಯಕತೆಯಿದ್ದರೆ ಅದನ್ನು ಒದಗಿಸುವ ವ್ಯವಸ್ಥೆ ಮಾಡಬೇಕು. ಇದನ್ನು 24 ಗಂಟೆಗಳೊಳಗೆ ಮಾಡಬೇಕು.
- ಒಳ್ಳೆಯ ಉದ್ದೇಶದಿಂದ ಮಾಹಿತಿ ನೀಡಿದ ವ್ಯಕ್ತಿಗಳಿಗೆ ಯಾವತ್ತೂ ಕಿರುಕುಳ ನೀಡಬಾರದು. ಹೆಸರು ಕೆಡಿಸುವ ಉದ್ದೇಶದಿಂದ ತಪ್ಪು ಮಾಹಿತಿ ನೀಡುವುದು ಅಪರಾಧವಾಗಿದೆ. ಆದರೆ, ಮಗುವು ತಪ್ಪು ಮಾಹಿತಿ ನೀಡಿದರೆ ಶಿಕ್ಷೆ ವಿಧಿಸಲಾಗುವುದಿಲ್ಲ.
- ಯಾವುದೇ ಮಾಧ್ಯಮದಲ್ಲಿ ಮಗುವಿನ ಮಾಹಿತಿಯನ್ನು ಪ್ರಸಾರ ಮಾಡುವಂತಿಲ್ಲ.
- ಮಾಧ್ಯಮದಲ್ಲಿ ಮಗುವಿನ ಮೇಲೆ ಲೈಂಗಿಕ ಅಪರಾಧಗಳನ್ನು ವರದಿ ಮಾಡುವಾಗ ಮಗುವಿನ ಹೆಸರು, ವಿಳಾಸ, ಭಾವಚಿತ್ರ, ಕುಟುಂಬದ ವಿವರ, ಶಾಲೆಯ ವಿವರ ಇತ್ಯಾದಿಗಳನ್ನು ನೀಡಕೂಡದು. ಇಂತಹ ಮಾಹಿತಿಗಳ ಪ್ರಸಾರ ಮಗುವಿನ ಒಳಿತಿಗೆ ಅವಶ್ಯವಾಗಿದ್ದಲ್ಲಿ ಮಾತ್ರ ನ್ಯಾಯಾಲಯದ ಅನುಮತಿ ಪಡೆದು ಪ್ರಸಾರ ಮಾಡಬೇಕು. ಇದನ್ನು ಅನುಸರಿಸದಿದ್ದಲ್ಲಿ ಪ್ರಕಾಶಕರು, ಮಾಲಕರು ಇಬ್ಬರೂ ಅಪರಾಧಿಗಳೆನಿಸಿಕೊಳ್ಳುತ್ತಾರೆ.
- ಯಾವುದೇ ಮಗುವನ್ನು ಲೈಂಗಿಕವಾಗಿ ದುರುಪಯೋಗಪಡಿಸಿದ ಮಾಹಿತಿ ಅಥವಾ ಇಂತಹ ಪ್ರಕರಣಗಳು ಅಂತರ್ಜಾಲ, ನಿಸ್ತಂತುಗಳಲ್ಲಿ ಪ್ರಸಾರವಾದ ಮಾಹಿತಿ ಮಾಧ್ಯಮ ಸಿಬ್ಬಂದಿಗಳಿಗೆ ಲಭ್ಯವಾದಲ್ಲಿ ಅವರು ಅದನ್ನು ಪೊಲೀಸ್ ಅಧಿಕಾರಿಗಳಿಗೆ ರವಾನಿಸಬೇಕು. ಇಂತಹ ಮಾಹಿತಿ ಇದ್ದೂ ಕೊಡದಿದ್ದರೆ ಅದು ತಪ್ಪಾಗುವುದು. ಉದ್ಯೋಗದಾತರು ತನ್ನ ಅಧೀನದಲ್ಲಿರುವ ಸಂಸ್ಥೆಯಲ್ಲಿ ಮಕ್ಕಳ ಲೈಂಗಿಕ ಕಿರುಕುಳದ ಮಾಹಿತಿಯನ್ನು ವರದಿ ಮಾಡದೇ ಇದ್ದಲ್ಲಿ ಶಿಕ್ಷೆಗೆ ಅರ್ಹರಾಗುವರು.

**ಪೊಲೀಸರು ಮಗುವಿನ ಹೇಳಿಕೆ ಪಡೆದುಕೊಳ್ಳುವ ಕ್ರಮಗಳು**

- ಮಗುವಿನ ಯಾವುದೇ ಹೇಳಿಕೆಯನ್ನು ಮಗುವಿನ ಮನೆಯಲ್ಲಿ ಅಥವಾ ಮಗುವಿಗೆ ಸೂಕ್ತವೆನಿಸಿದ ಸ್ಥಳದಲ್ಲಿ, ಸಾಧ್ಯವಾದಷ್ಟು ಸಬ್ಇನ್‌ಸ್ಪೆಕ್ಟರ್ ಅವರೇ ತೆಗೆದುಕೊಳ್ಳಬೇಕು. ಆ ಸಮಯದಲ್ಲಿ ಅವರು ಸಾದಾ ಉಡುಪಿನಲ್ಲಿರಬೇಕು.
- ವಿಚಾರಣೆಯ ಯಾವುದೇ ಹಂತದಲ್ಲಿ ಮಗು ಹಾಗೂ ಅಪರಾಧಿ ಮುಖಾಮುಖಿಯಾಗದಂತೆ ಅಥವಾ ಒಟ್ಟಿಗೆ ಇರದಂತೆ ನೋಡಿಕೊಳ್ಳಬೇಕು.
- ಯಾವುದೇ ಮಗುವನ್ನು ರಾತ್ರಿ ಹೊತ್ತಿನಲ್ಲಿ ಪೊಲೀಸು ಠಾಣೆಯಲ್ಲಿ ಉಳಿಸಬಾರದು.
- ಮಗುವಿನ ಗುರುತಿಸುವಿಕೆಯನ್ನು ಗೌಪ್ಯವಾಗಿಡಬೇಕು.

**ನ್ಯಾಯಾಧೀಶರು ಮಗುವಿನ ಹೇಳಿಕೆಯನ್ನು ದಾಖಲು ಮಾಡಿಕೊಳ್ಳುವ ಕ್ರಮಗಳು**

- ನ್ಯಾಯಾಧೀಶರು ಮಗುವು ಹೇಳಿದ ಹಾಗೆಯೇ ಹೇಳಿಕೆಯನ್ನು ಬರೆಯಬೇಕು. ಹೇಳಿಕೆಯನ್ನು ಪಡೆದುಕೊಳ್ಳುವಾಗ ಆಪಾದಿತನ ಪರ ನ್ಯಾಯವಾದಿ ಹಾಜರಾಗಬೇಕಾದ ಅಗತ್ಯವಿಲ್ಲ.
- ಮಗುವಿನ ಹೆತ್ತವರು ಯಾ ಮಗುವಿಗೆ ನಂಬಿಕೆ ಇರುವ ವ್ಯಕ್ತಿಗಳ ಸಮ್ಮುಖದಲ್ಲಿ ಹೇಳಿಕೆಯನ್ನು ಪಡೆಯಬೇಕು ಮತ್ತು ಹೇಳಿಕೆಯ ಒಂದು ಪ್ರತಿಯನ್ನು ಮಗುವಿಗೆ ಮತ್ತು ಅದರ ಹೆತ್ತವರಿಗೆ ಯಾ ಅದರ ಸಂಬಂಧಿಕರಿಗೆ ನೀಡಬೇಕು. ಒಂದು ವೇಳೆ ಮಗು ಮಾನಸಿಕ ಅಥವಾ ದೈಹಿಕ ಅಶಕ್ತವಾಗಿದ್ದಲ್ಲಿ ಆ ಬಗ್ಗೆ ತರಬೇತಿ ಹೊಂದಿದ ಶಿಕ್ಷಕಿಯ ಸಹಾಯದಿಂದ ಮಗುವಿನ ಹೇಳಿಕೆಯನ್ನು ದಾಖಲಿಸಬೇಕು.

**ಮಗುವಿನ ವೈದ್ಯಕೀಯ ತಪಾಸಣೆ**

- ಹೆಣ್ಣು ಮಗುವಿನ ವೈದ್ಯಕೀಯ ಪರೀಕ್ಷೆಯನ್ನು ಮಹಿಳಾ ವೈದ್ಯರಿಂದಲೇ ಮಾಡಿಸಬೇಕು. ಆ ಸಮಯದಲ್ಲಿ ಮಗುವಿನ ಹೆತ್ತವರು ಇರಬೇಕು. ಹೆತ್ತವರು ಇಲ್ಲದಿದ್ದಾಗ ಆಸ್ಪತ್ರೆಯ ಮುಖ್ಯಸ್ಥರು ಒಬ್ಬ ಮಹಿಳೆಯನ್ನು ಅಲ್ಲಿರಲು ನೇಮಕ ಮಾಡಬೇಕು.
- ರಾಜ್ಯದ ಮುಖ್ಯ ನ್ಯಾಯಾಧೀಶರ ಜೊತೆ ಸಮಾಲೋಚನೆ ನಡೆಸಿ, ರಾಜ್ಯ ಸರಕಾರವು ಮಕ್ಕಳಿಗೆ ಪ್ರತೀ ಜಿಲ್ಲೆಗೊಂದು ವಿಶೇಷ ನ್ಯಾಯಾಲಯವನ್ನು ಸ್ಥಾಪಿಸಬೇಕು. ಪ್ರತೀ ವಿಶೇಷ ನ್ಯಾಯಾಲಯಕ್ಕೆ ಪ್ರತ್ಯೇಕವಾದ 7 ವರ್ಷಗಳ ಅನುಭವವಿರುವ ಸರ್ಕಾರಿ ಅಭಿಯೋಜಕರನ್ನು ಆಯ್ಕೆ ಮಾಡಬೇಕು. ರಾಜ್ಯ ಮಕ್ಕಳ ಹಕ್ಕುಗಳ ಆಯೋಗವು ಕಾನೂನಿನ ಅನುಷ್ಠಾನವನ್ನು ಮತ್ತು ಮೇಲ್ವಿಚಾರಣೆಯನ್ನು ನೋಡಿಕೊಳ್ಳಬೇಕು.
- ಮಗುವಿಗೆ ಕೇಳುವ ಪ್ರಶ್ನೆಗಳನ್ನು ಆಪಾದಿತನ ಪರ ವಕೀಲರು ಮತ್ತು ಅಭಿಯೋಜಕರು ನ್ಯಾಯಾಧೀಶರ ಮೂಲಕ ಕೇಳಬೇಕು. ನೇರವಾಗಿ ಮಗುವನ್ನು ಪ್ರಶ್ನಿಸುವಂತಿಲ್ಲ ಮತ್ತು ಪ್ರಶ್ನೆ ಕೇಳುವ ನಡುವೆ ಮಗುವಿಗೆ ವಿರಾಮವನ್ನು ಕೂಡಾ ಕೊಡಬೇಕು. ಮಗುವನ್ನು ಪದೇ ಪದೇ ಕರೆದು ತೀವ್ರವಾಗಿ ಪ್ರಶ್ನೆ ಕೇಳುವ ಮೂಲಕ ತೊಂದರೆ ಕೊಡಬಾರದು. ಮಗುವಿನ ಘನತೆಗೆ ಕುಂದು ತರುವ ರೀತಿಯಲ್ಲಿ ಪ್ರಶ್ನಿಸಕೂಡದು. ಮಗುವಿನ ಗುರುತಿಸುವಿಕೆಯ ಬಗ್ಗೆ ಗೌಪ್ಯತೆಯನ್ನು ಕಾಪಾಡಬೇಕು. ಪ್ರಕರಣವನ್ನು ಗೌಪ್ಯವಾಗಿ ನಡೆಸಬೇಕು.
- ನ್ಯಾಯಾಲಯವು ಮಗುವಿಗೆ ಆದ ದೈಹಿಕ ಹಾಗೂ ಮಾನಸಿಕ ಹಾನಿಗೆ ಪರಿಹಾರವನ್ನು ಜಿಲ್ಲಾ ಕಾನೂನು ಸೇವಾ ಪ್ರಾಧಿಕಾರದ ಮೂಲಕ ಆರೋಪಿಯಿಂದ ಮಗುವಿಗೆ ಪುರ್ನವಸತಿಗಾಗಿ ದೊರಕಿಸಿಕೊಡಬಹುದು.
- ಪ್ರಕರಣದ ವಿಚಾರಣೆಯನ್ನು ಒಂದು ತಿಂಗಳೊಳಗೆ ನಡೆಸಿ ಇಡೀ ಪ್ರಕರಣವನ್ನು 1 ವರ್ಷದೊಳಗೆ ಮುಗಿಸಬೇಕು.
- ತಾನು ತಪ್ಪಿತಸ್ಥನಲ್ಲವೆಂದು ಸಾಬೀತುಪಡಿಸುವ ಜವಬ್ದಾರಿಯನ್ನು ಆಪಾದಿತನ ಮೇಲೆಯೇ ಈ ಕಾನೂನು ಹೊರಿಸುತ್ತದೆ.

ಮೇಲೆ ತಿಳಿಸಿದ ಎಲ್ಲಾ ಪ್ರಕ್ರಿಯೆಗಳು ಮಕ್ಕಳನ್ನು ಗಮನದಲ್ಲಿಟ್ಟುಕೊಂಡೇ ಇವೆ. ಅವು ಶಿಶು ಸ್ನೇಹಿ ಪ್ರಕ್ರಿಯೆಗಳಾಗಿವೆ. ಇವು ಈ ಕಾಯ್ದೆಯ ವಿಶೇಷತೆಯಾಗಿದೆ.

## ಭಾರತೀಯ ದಂಡ ಸಂಹಿತೆಗೆ ತಿದ್ದುಪಡಿ

ಇತ್ತೀಚೆಗೆ ಅಪ್ರಾಪ್ತ ವಯಸ್ಸಿನ ಹೆಣ್ಣು ಮಕ್ಕಳ ಮೇಲಿನ ಲೈಂಗಿಕ ದೌರ್ಜನ್ಯವು ತೀವ್ರವಾಗಿದ್ದು, ಇದನ್ನು ತಡೆಹಿಡಿಯುವ ನಿಟ್ಟಿನಲ್ಲಿ ಭಾರತೀಯ ದಂಡ ಸಂಹಿತೆಯಲ್ಲಿ 2018ರಲ್ಲಿ ಕೆಲವೊಂದು ತಿದ್ದುಪಡಿಗಳನ್ನು ಮಾಡಲಾಗಿರುತ್ತದೆ. ಈ ತಿದ್ದುಪಡಿಯ ಅನ್ವಯ ಅಪ್ರಾಪ್ತ ವಯಸ್ಸಿನ ಹೆಣ್ಣು ಮಕ್ಕಳ ಮೇಲೆ ಅತ್ಯಾಚಾರ ಎಸಗಿದಲ್ಲಿ ಅಪರಾಧಿಯು ಈ ಕೆಳಕಂಡ ಘೋರ ಶಿಕ್ಷೆಗೆ ಒಳಗಾಗುತ್ತಾನೆ :

12 ವರ್ಷ ವಯಸ್ಸಿನೊಳಗಿನ ಹೆಣ್ಣು ಮಗುವಿನ ಮೇಲೆ ಅತ್ಯಾಚಾರ ಎಸಗಿದ್ದಲ್ಲಿ ಅಪರಾಧಿಗೆ ಕನಿಷ್ಠ 20 ವರ್ಷ ತೀವ್ರತರದ ಜೈಲು ಶಿಕ್ಷೆಯಿಂದ ಜೀವಾವಧಿ ಶಿಕ್ಷೆ ಮತ್ತು ದಂಡಕ್ಕೆ ಒಳಗಾಗುತ್ತಾನೆ. ಮರಣ ದಂಡನೆಯನ್ನು ವಿಧಿಬಹುದಾಗಿದೆ. ದಂಡದ ಮೊತ್ತವು ಸಮಂಜಸವಾಗಿದ್ದು, ಸಂತ್ರಸ್ತೆಯ ವೈದ್ಯಕೀಯ ಮತ್ತು ಪುನರ್ವಸತಿ ವೆಚ್ಚವನ್ನು ಭರಿಸುವಂತಿರಬೇಕು.

12 ವರ್ಷ ವಯಸ್ಸಿನೊಳಗಿನ ಹೆಣ್ಣು ಮಗುವಿನ ಮೇಲೆ ಸಾಮೂಹಿಕ ಅತ್ಯಾಚಾರ ಎಸಗಿದ್ದಲ್ಲಿ ಅಪರಾಧಿಗಳಿಗೆ ಕನಿಷ್ಠ ಜೀವಾವಧಿ ಶಿಕ್ಷೆ ಮತ್ತು ದಂಡಕ್ಕೆ ಒಳಗಾಗುತ್ತಾನೆ ಅಥವಾ ಮರಣ ದಂಡನೆಯನ್ನು ವಿಧಿಸಬಹುದಾಗಿದೆ.

16 ವರ್ಷ ವಯಸ್ಸಿನೊಳಗಿನ ಹೆಣ್ಣು ಮಗುವಿನ ಮೇಲೆ ಅತ್ಯಾಚಾರ ಎಸಗಿದ್ದಲ್ಲಿ ಅಪರಾಧಿಗಳಿಗೆ ಕನಿಷ್ಠ 20 ವರ್ಷ ತೀವ್ರತರದ ಜೈಲು ಶಿಕ್ಷೆಯಿಂದ ಜೀವಾವಧಿ ಶಿಕ್ಷೆ ಮತ್ತು ದಂಡಕ್ಕೆ ಒಳಗಾಗುತ್ತಾನೆ.

16 ವರ್ಷ ವಯಸ್ಸಿನೊಳಗಿನ ಹೆಣ್ಣು ಮಗುವಿನ ಮೇಲೆ ಸಾಮೂಹಿಕ ಅತ್ಯಾಚಾರ ಎಸಗಿದ್ದಲ್ಲಿ ಅಪರಾಧಿಗಳಿಗೆ ಕನಿಷ್ಠ ಜೀವಾವಧಿ ಶಿಕ್ಷೆ ಮತ್ತು ದಂಡಕ್ಕೆ ಒಳಗಾಗುತ್ತಾನೆ.

ಅಪರಾಧಿಯು ಈಗಾಗಲೇ ಅತ್ಯಾಚಾರ ಪ್ರಕರಣದಲ್ಲಿ ಶಿಕ್ಷೆಗೊಳಗಾಗಿದ್ದು ಅಪರಾಧ ಮತ್ತೊಮ್ಮೆ ಮರುಕಳಿಸಿದರೆ, ಅಪರಾಧಿಗೆ ಜೀವವಾಧಿ ಶಿಕ್ಷೆ ಅಥವಾ ಮರಣದಂಡನೆ ವಿಧಿಸಬಹುದಾಗಿದೆ.

| ಅಪರಾಧಗಳು | ತಿದ್ದುಪಡಿಯ ಮೊದಲು | 2019ರ ತಿದ್ದುಪಡಿಯ ನಂತರ |
|---|---|---|
| ತೂರಿಸುವ ಮೂಲಕ (ಭೇದಕ) ಲೈಂಗಿಕ ದೌರ್ಜನ್ಯ<br><br>16 ವರ್ಷದೊಳಗಿನ ಮಗುವಿನೊಂದಿಗೆ ಈ ಕೃತ್ಯವೆಸಗಿದಲ್ಲಿ | 7 ವರ್ಷ ಜೈಲು ಶಿಕ್ಷೆಯಿಂದ ಜೀವಾವಧಿ ಶಿಕ್ಷೆ<br><br>– | 10 ವರ್ಷ ಜೈಲು ಶಿಕ್ಷೆಯಿಂದ ಜೀವವಾಧಿ ಶಿಕ್ಷೆ ವಿಧಿಸಬಹುದು.<br><br>ಕನಿಷ್ಠ 20 ವರ್ಷ ಜೈಲು ಶಿಕ್ಷೆಯಿಂದ ಜೀವಾವಧಿ ಶಿಕ್ಷೆಯುವರೆಗೆ ವಿಸ್ತರಿಸಬಹುದು. |
| ತೀವ್ರ ಭೇದಕ ಲೈಂಗಿಕ ದೌರ್ಜನ್ಯ | ಕನಿಷ್ಠ 10 ವರ್ಷ ಜೈಲು ಶಿಕ್ಷೆಯಿಂದ ಜೀವಾವಧಿ ಶಿಕ್ಷೆ | ಕನಿಷ್ಠ 20 ವರ್ಷ ಜೈಲು ಶಿಕ್ಷೆಯಿಂದ ಜೀವಾವಧಿ ಅಥವಾ ಮರಣ ದಂಡನೆಯನ್ನು ನೀಡಬಹುದು. |
| ಲೈಂಗಿಕ ದೌರ್ಜನ್ಯ | ಕನಿಷ್ಠ 3 ವರ್ಷದಿಂದ 5 ವರ್ಷ ಗಳವರೆಗೆ ಸೆರೆವಾಸ ಮತ್ತು ದಂಡ ವಿಧಿಸಲಾಗುವುದು. | ಕನಿಷ್ಠ 3 ವರ್ಷದಿಂದ 5 ವರ್ಷ ಗಳವರೆಗೆ ಸೆರೆವಾಸ ಮತ್ತು ದಂಡ ವಿಧಿಸಲಾಗುವುದು. |
| ಲೈಂಗಿಕ ಕಿರುಕುಳ | 3 ವರ್ಷಗಳವರೆಗೆ ಸೆರೆವಾಸ ಮತ್ತು ದಂಡ ವಿಧಿಸಲಾಗುವುದು. | 3 ವರ್ಷಗಳವರೆಗೆ ಸೆರೆವಾಸ ಮತ್ತು ದಂಡ ವಿಧಿಸಲಾಗುವುದು. |
| ಮಕ್ಕಳನ್ನು ಅಶ್ಲೀಲ ಚಿತ್ರೀಕರಣಕ್ಕೆ ಬಳಸುವುದು | ಕನಿಷ್ಠ 5 ವರ್ಷ ಜೈಲು ಶಿಕ್ಷೆಯಿಂದ 7 ವರ್ಷದವರೆಗೆ ವಿಸ್ತರಿಸಬಹುದು. | ಅಪರಾಧಿಯು ಪ್ರಥಮ ಬಾರಿಗೆ ಅಪರಾಧವೆಸಗಿದಲ್ಲಿ 5 ವರ್ಷ ಜೈಲು ಶಿಕ್ಷೆ ಮತ್ತು ಅಪರಾಧ ಮರುಕಳಿಸಿದಲ್ಲಿ 7 ವರ್ಷ ಜೈಲು ಶಿಕ್ಷೆ ವಿಧಿಸಬಹುದು. |
| ಮಗುವಿನ ಅಶ್ಲೀಲ ಚಿತ್ರೀಕರಣ ಗಳನ್ನೊಳಗೊಂಡ ಪರಿಕರಗಳನ್ನು ಸಂಗ್ರಹಿಸುವುದು ಅಥವಾ ನಾಶಪಡಿಸದೇ ಇರುವುದು | – | ಅಪರಾಧಿಯು ಮೊದಲನೇ ಬಾರಿ ಅಪರಾಧವೆಸಗಿದಲ್ಲಿ ರೂ. 5000 ದಂಡ, ಎರಡನೇ ಬಾರಿಗೆ ಅಪರಾಧವು ಮರುಕಳಿಸಿದಲ್ಲಿ ರೂ.10,000/- ದಂಡವಿಧಿಸಬಹುದು. |
| ಮಗುವಿನ ಅಶ್ಲೀಲ ಚಿತ್ರೀಕರಣ ಗಳನ್ನೊಳಗೊಂಡ ಪರಿಕರಗಳನ್ನು ಇನ್ನೊಬ್ಬರಿಗೆ ಪ್ರಸಾರ ಅಥವಾ ಹಂಚುವ ಉದ್ದೇಶದಿಂದ ಸಂಗ್ರಹಿಸುವುದು ಅಥವಾ ಹೊಂದಿರುವುದು | – | ಕನಿಷ್ಠ 3 ವರ್ಷ ಜೈಲು |
| ಮಗುವಿನ ಅಶ್ಲೀಲ ಚಿತ್ರೀಕರಣಗಳ ನ್ನೊಳಗೊಂಡ ಪರಿಕರಗಳನ್ನು ವಾಣಿಜ್ಯ ಉದ್ದೇಶಕ್ಕಾಗಿ ಸಂಗ್ರಹಿಸುವುದು ಅಥವಾ ಹೊಂದಿರುವುದು | ಕನಿಷ್ಠ 3 ವರ್ಷ ಜೈಲು ಶಿಕ್ಷೆ | ಅಪರಾಧಿಯು ಪ್ರಥಮ ಬಾರಿಗೆ ಅಪರಾಧವೆಸಗಿದಲ್ಲಿ ಕನಿಷ್ಠ 3 ರಿಂದ 5 ವರ್ಷ ಜೈಲು ಶಿಕ್ಷೆ ಮತ್ತು ಅಪರಾಧ ಮರುಕಳಿಸಿದಲ್ಲಿ 5 ರಿಂದ 7 ವರ್ಷ ಜೈಲು ಶಿಕ್ಷೆ ವಿಧಿಸಬಹುದು. |

**ಚರ್ಚೆಗೆ ಪ್ರಕರಣಗಳು**

**ಪ್ರಕರಣ–1 :**

ಪೊಲೀಸ್ ಅಧಿಕಾರಿಯೋರ್ವರು ತನ್ನ ಕರ್ತವ್ಯಕ್ಕೆ ತೆರಳುತ್ತಿದ್ದ ಸಂದರ್ಭದಲ್ಲಿ ರಸ್ತೆಯ ಪಕ್ಕದ ಬಾಡಿಗೆ ಮನೆಯೊಂದರ 15 ವರುಷದ ಹುಡುಗನೊಬ್ಬ ಆಟವಾಡುತ್ತಿದ್ದ. ಲೈಂಗಿಕ ತೃಪ್ತಿಯ ಕನಸು ಕಾಣುತ್ತಿದ್ದ ಅಧಿಕಾರಿ ತನ್ನ ಬೈಕ್ ನಿಲ್ಲಿಸಿ, ಆ ಹುಡುಗನನ್ನು ಕರೆದ. ಪೊಟ್ಟಣವೊಂದನ್ನು ತೋರಿಸಿದ. ಆ ಆಸೆಗೆ ಹುಡುಗ ಹತ್ತಿರ ಬಂದ. ಹುಡುಗನಲ್ಲಿ ತಮಾಷೆ ಮಾತಾಡಿ ತಲೆ ಸವರಿ ಅಲ್ಲೇ ಇದ್ದ ಬಸ್‌ಸ್ಟ್ಯಾಂಡ್‌ಗೆ ಕರಕೊಂಡು ಹೋದ. ಹೋದವನೇ ಹುಡುಗನನ್ನು ಗಟ್ಟಿಹಿಡಿದು ತನ್ನ ಶಿಶ್ನವನ್ನು ಹುಡುಗನ ಗುದದ್ವಾರಕ್ಕೆ ತುರುಕಿಸಿದ. ಹುಡುಗನಿಗೆ ಏನೂ ಮಾಡಲಾಗಲಿಲ್ಲ. ಎರಡೇ ನಿಮಿಷದಲ್ಲಿ ಹುಡುಗ ತಪ್ಪಿಸಿಕೊಂಡು ಓಡಿಹೋದ. ಮನೆಯವರು ಹುಡುಕಿಕೊಂಡು ಬರುತ್ತಿದ್ದರು. ಹುಡುಗ ಎಲ್ಲವನ್ನೂ ಹೇಳಿದ. ಬೈಕ್ ನಂಬರನ್ನೂ ಕೂಡಾ.

**ಪ್ರಶ್ನೆಗಳು**

1. ಈ ಪ್ರಕರಣದಲ್ಲಿ ಯಾವ ವಿಧದ ಲೈಂಗಿಕ ಅಪರಾಧವಿದೆ?
2. ಈ ಪ್ರಕರಣಕ್ಕೆ ಸಂಬಂಧಿಸಿ ಪೋಕ್ಸೋ ಕಾಯ್ದೆಯಡಿ ದೂರುದಾರರು ತೆಗೆದುಕೊಳ್ಳಬೇಕಾದ ಕ್ರಮಗಳ ಹಂತಗಳೇನು ?
3. ಈ ಪ್ರಕರಣಕ್ಕೆ ಸಂಬಂಧಿಸಿ ಆಪಾದಿತನಿಗೆ ಆಗುವ ಶಿಕ್ಷೆಯೇನು?

**ಪ್ರಕರಣ 2**

ಆಕೆ 13 ವರ್ಷದ ಬಾಲಕಿ. 7ನೇ ತರಗತಿಯಲ್ಲಿ ಓದುತ್ತಿದ್ದಳು. ತಂದೆ ತಾಯಿ ದಿನಾ ಕೂಲಿ ಕೆಲಸಕ್ಕೆ ಹೋಗುತ್ತಿದ್ದರು. ಆ ದಿನ ಬಾಲಕಿಗೆ ಶಾಲೆಗೆ ರಜೆ. ಪೋಷಕರು ಇಲ್ಲದ ಸಂದರ್ಭ ನೋಡಿದ 40 ವರ್ಷದ ನೆರೆಕರೆಯಾತ ಬಾಲಕಿಯ ಮನೆಯ ಹತ್ತಿರ ಬಂದು ಕುಡಿಯಲು ನೀರು ಕೇಳಿದ. ನೀರು ತರಲು ಬಾಲಕಿ ಮನೆಯೊಳಗೆ ಹೋದ ಸಂದರ್ಭದಲ್ಲೇ ಆತನೂ ಬಾಲಕಿಯ ಹಿಂದೆ ಮನೆಯೊಳಗೆ ಹೋದ. ಹೋದವನೇ ಬಾಲಕಿಯಿಂದ ನೀರು ತಗೊಳ್ಳುವ ಸಂದರ್ಭ ಬಾಲಕಿಯ ದೇಹದ ಅಂಗಾಂಗಗಳನ್ನು ಸ್ಪರ್ಶಿಸಿದ. ತಕ್ಷಣ ಆಕೆ ಬೊಬ್ಬೆ ಹಾಕಿದಾಗ ಆತ ಈ ವಿಷಯವನ್ನು ಯಾರಲ್ಲಿಯೂ ಹೇಳಬಾರದೆಂದು ಜೀವ ಬೆದರಿಕೆಯನ್ನು ಹಾಕುತ್ತಾನೆ.

**ಪ್ರಶ್ನೆಗಳು**

1 ಈ ಪ್ರಕರಣದಲ್ಲಿ ಯಾವ ವಿಧದ ಲೈಂಗಿಕ ಅಪರಾಧವಿದೆ?

2 ಈ ಪ್ರಕರಣಕ್ಕೆ ಸಂಬಂಧಿಸಿ ಪೋಕ್ಸೊ ಕಾಯ್ದೆಯಡಿ ದೂರುದಾರರು ತೆಗೆದುಕೊಳ್ಳಬೇಕಾದ ಕ್ರಮಗಳ ಹಂತಗಳೇನು?

3 ಈ ಪ್ರಕರಣಕ್ಕೆ ಸಂಬಂಧಿಸಿ ಆಪಾದಿತನಿಗೆ ಆಗುವ ಶಿಕ್ಷೆಯೇನು?

**ಪೋಕ್ಸೊ ವಿಶೇಷ ನ್ಯಾಯಾಲಯದ ತೀರ್ಪುಗಳು**

ದಕ್ಷಿಣ ಕನ್ನಡ ಜಿಲ್ಲೆಯ ಕೆಂಜಾರು ಕಲ್ಲಾಡಿಯ ಗಂಗಾಧರ(51) ಎಂಬ ಆರೋಪಿ 2013ರ ಜುಲೈ 11ರಂದು ಅಪ್ರಾಪ್ತ ವಯಸ್ಸಿನ ಬುದ್ಧಿಮಾಂದ್ಯ ಬಾಲಕಿಯ ಮೇಲೆ ನಿರಂತರವಾಗಿ ಅತ್ಯಾಚಾರ ನಡೆಸಿರುತ್ತಾನೆ. ಅಪರಾಧಿಯು ಬಾಲಕಿಯ ಮನೆಯನ್ನು ಅಕ್ರಮವಾಗಿ ಪ್ರವೇಶಿಸಿ ಬಾಲಕಿಯನ್ನು ಪುಸಲಾಯಿಸಿ ಲೈಂಗಿಕ ಕ್ರಿಯೆ ನಡೆಸಿರುತ್ತಾನೆ. ಅಲ್ಲದೆ ವಿಷಯವನ್ನು ಯಾರಿಗೂ ಹೇಳದಂತೆ ಬೆದರಿಕೆ ಒಡ್ಡಿರುತ್ತಾನೆ ಎಂದು ಆರೋಪವಾಗಿರುತ್ತದೆ. ಈ ಬಗ್ಗೆ ಮಾಹಿತಿಯನ್ನು ಪಡೆದಿದ್ದ ಮಂಗಳೂರಿನ ಚೈಲ್ಡ್‌ಲೈನ್ ಸಂಘಟನೆಯ ಸದಸ್ಯರು ಪೋಲಿಸರ ನೆರವಿನಿಂದ ಪತ್ತೆ ಹಚ್ಚಿರುತ್ತಾರೆ. ಈ ಹಿನ್ನೆಲೆಯಲ್ಲಿ ದಿನಾಂಕ 2013ರ ಆಗಸ್ಟ್ 23ರಂದು ಆರೋಪಿಯ ಮೇಲೆ ಬಜ್ಪೆ ಪೊಲೀಸು ಠಾಣೆಯಲ್ಲಿ ಪ್ರಕರಣ ದಾಖಲಾಗಿರುತ್ತದೆ. ಮಾರನೇ ದಿನ ಪೊಲೀಸರು ಆರೋಪಿಯನ್ನು ಬಂಧಿಸಿ ನ್ಯಾಯಾಲಯಕ್ಕೆ ದೋಷಾರೋಪಣಾ ಪಟ್ಟಿ ಸಲ್ಲಿಸಿರುತ್ತಾರೆ. ಈ ಪ್ರಕರಣವು ನ್ಯಾಯಾಲಯದಲ್ಲಿ ವಿಚಾರಣೆಗೊಂಡು, 16 ಮಂದಿ ಸಾಕ್ಷಿಗಳು ಅಪ್ರಾಪ್ತ ಬಾಲಕಿಯ ಪರ ಸಾಕ್ಷಿ ನುಡಿದಿರುತ್ತಾರೆ. ಈ ಪ್ರಕರಣದ ವಿಚಾರಣೆಯ ಬಳಿಕ ಮಂಗಳೂರಿನ ಪೋಕ್ಸೊ ವಿಶೇಷ ನ್ಯಾಯಾಲಯವು ಅಪರಾಧ ಸಾಬೀತುಪಡಿಸಿರುತ್ತದೆ. ತೀರ್ಪಿನ ಅನುಸಾರ ಅಪರಾಧಿಗೆ ಜೀವಾವಧಿ ಶಿಕ್ಷೆ ಮತ್ತು 50 ಸಾವಿರ ದಂಡ ವಿಧಿಸಿರುತ್ತದೆ. ದಂಡದ ಮೊತ್ತವನ್ನು ಬಾಲಕಿಯ ಹೆತ್ತವರು ಜಿಲ್ಲಾ ಕಾನೂನು ಸೇವಾ ಪ್ರಾಧಿಕಾರಕ್ಕೆ ಅರ್ಜಿ ಸಲ್ಲಿಸಿ ಪಡೆಯುವಂತೆ

ನ್ಯಾಯಾಲಯವು ಆದೇಶಿಸಿರುತ್ತದೆ. ಒಂದು ಪಕ್ಷ ಆರೋಪಿಯು ದಂಡ ಪಾವತಿಸದಿದ್ದಲ್ಲಿ 12 ತಿಂಗಳ ಸಾದಾ ಸಜೆಯನ್ನು ಅಪರಾಧಿಯು ಅನುಭವಿಸುವಂತೆ ತೀರ್ಪಿನಲ್ಲಿ ಉಲ್ಲೇಸಿರುತ್ತದೆ.

ಉಡುಪಿ ಜಿಲ್ಲೆ ಬೈಂದೂರು ಭಾಗದ ರವಿ ತಾನು ವರದಿಗಾರನೆಂದು ಹೇಳಿಕೊಂಡು ಬೈಂದೂರು ಭಾಗದ ಗ್ರಾಮೀಣ ಪ್ರದೇಶಕ್ಕೆ ತೆರಳಿ ಅಲ್ಲಿನ ಬಾಲಕನೋರ್ವನಿಗೆ ತಾನು ಪ್ರಾಣಿ, ಪಕ್ಷಿ, ಶಾಲಾ ಕಟ್ಟಡದ ಛಾಯಾ ಚಿತ್ರ ತೆಗೆಯಲು ತನ್ನ ಜತೆ ಬರುವಂತೆ ಪುಸಲಾಯಿಸಿ ಕರೆದೊಯ್ದು ಆತನ ಮೇಲೆ ಅಸ್ವಾಭಾವಿಕ ಲೈಂಗಿಕ ದೌರ್ಜನ್ಯ ಎಸಗಿದ ಆರೋಪಿಯಾಗಿದ್ದರು. ಈ ಬಗ್ಗೆ ಬೈಂದೂರು ಠಾಣೆಗೆ ನೀಡಿದ ದೂರಿನಂತೆ 2018ರ ನವಂಬರ್‌ನಲ್ಲಿ ಪೋಕ್ಸೊ ಕಾಯ್ದೆಯಡಿ ಪ್ರಕರಣ ದಾಖಲಾಗಿ ಆರೋಪಿಯನ್ನು ಬಂಧಿಸಲಾಗಿತ್ತು. ಅಂದಿನ ಬೈಂದೂರು ಸಿಪಿಐ ನ್ಯಾಯಾಲಯಕ್ಕೆ ದೋಷಾರೋಪಣಾ ಪಟ್ಟಿ ಸಲ್ಲಿಸಿದ್ದು, 36 ಸಾಕ್ಷಿಗಳಲ್ಲಿ ಸಂತ್ರಸ್ತ ಬಾಲಕನ ಸಹಿತ 15 ಮಂದಿ ಸಾಕ್ಷಿ ನುಡಿದಿದ್ದರು. ಈ ಕುರಿತು ವಿಚಾರಣೆ ನಡೆಸಿದ ಉಡುಪಿ ಜಿಲ್ಲಾ ಹೆಚ್ಚುವರಿ ಮತ್ತು ಸತ್ರ ನ್ಯಾಯಲಯದ ಪೋಕ್ಸೊ ತ್ವರಿತ ವಿಶೇಷ ನ್ಯಾಯಾಲಯದ ನ್ಯಾಯಾಧೀಶೆ, ಆರೋಪಿಗೆ ಮೊದಲ ಪ್ರಕರಣದಲ್ಲಿ 10 ವರ್ಷ ಜೈಲು ಶಿಕ್ಷೆ, 10 ಸಾವಿರ ದಂಡ ವಿಧಿಸಿ ಆದೇಶ ನೀಡಿದ್ದಾರೆ. ದಂಡದಲ್ಲಿ 5 ಸಾವಿರ ರೂ. ಸರಕಾರ ಮತ್ತು 5 ಸಾವಿರ ರೂ. ನೊಂದ ಬಾಲಕನಿಗೆ ನೀಡಲು ಆದೇಶದಲ್ಲಿ ತಿಳಿಸಲಾಗಿದೆ.

**ಮೌಲ್ಯ ಮಾಪನ**

1. ಧಾರ್ಮಿಕ ಮುಖಂಡರು ತೂರಿಸುವ ಮೂಲಕ ಲೈಂಗಿಕ ದೌರ್ಜನ್ಯ ಮಾಡಿದರೆ ಅದು ಅಪರಾಧವಾಗುವುದಿಲ್ಲ. (ತಪ್ಪು)
2. ಲೈಂಗಿಕ ಉದ್ದೇಶದಿಂದ ಮಗುವನ್ನು ಹಿಂಬಾಲಿಸಿದರೆ ಅದು ಲೈಂಗಿಕ ಕಿರುಕುಳವಾಗುತ್ತದೆ. (ಸರಿ)
3. ಮಗುವಿನ ಬೆತ್ತಲೆಚಿತ್ರ ತಯಾರಿಸಿದರೆ ಅದು ಅಪರಾಧವಲ್ಲ. (ತಪ್ಪು)
4. ಲೈಂಗಿಕ ದೌರ್ಜನ್ಯಕ್ಕೆ ಒಳಗಾದ ಮಗುವಿನ ವಿವರಗಳನ್ನು ಮಾಧ್ಯಮಗಳು ಬಹಿರಂಗಪಡಿಸಬಹುದು. (ತಪ್ಪು)
5. ದೌರ್ಜನ್ಯಕ್ಕೆ ಒಳಗಾದ ಮಗುವನ್ನು ರಾತ್ರಿ ಹೊತ್ತಿನಲ್ಲಿ ಪೊಲೀಸು ಠಾಣೆಯಲ್ಲಿ ಉಳಿಸಿಕೊಳ್ಳಬಹುದು. (ತಪ್ಪು)
6. ಮಗುವು ತಪ್ಪು ಮಾಹಿತಿ ನೀಡಿದರೆ ಅದಕ್ಕೆ ಶಿಕ್ಷೆಯಿದೆ. (ತಪ್ಪು)
7. ದೌರ್ಜನ್ಯಕ್ಕೆ ಒಳಗಾದ ಮಗುವನ್ನು ಪದೇ ಪದೇ ಕರೆದು ಪ್ರಶ್ನೆಗಳನ್ನು ಕೇಳುವಂತಿಲ್ಲ. (ಸರಿ)
8. ಮಗುವನ್ನು ಲೈಂಗಿಕವಾಗಿ ದುರುಪಯೋಗಪಡಿಸಿದ ಮಾಹಿತಿ ತಿಳಿದಿದ್ದೂ ಆ ಬಗ್ಗೆ ದೂರು ನೀಡದಿದ್ದಲ್ಲಿ ಅದು ಅಪರಾಧವಾಗುತ್ತದೆ. (ಸರಿ)
9. ಕಾಯ್ದೆಯು ಗಂಡು ಮಕ್ಕಳಿಗೆ ಅನ್ವಯಿಸುವುದಿಲ್ಲ. (ತಪ್ಪು)
10. ಹೆಣ್ಣು ಮಗುವಿನ ವೈದ್ಯಕೀಯ ತಪಾಸಣೆಯನ್ನು ಮಹಿಳೆಯೊಬ್ಬಳ ಸಮ್ಮುಖದಲ್ಲಿ ಪುರುಷ ವೈದ್ಯರೂ ಮಾಡಬಹುದು. (ಸರಿ)
11. ಅಪ್ರಾಪ್ತ ಬಾಲಕಿಯ ಮೇಲೆ ನಿರಂತರ ಅತ್ಯಾಚಾರ ಎಸಗಿದ ಆರೋಪಿ ಆಕೆಯನ್ನು ಮದುವೆಯಾಗಲು ಒಪ್ಪಿದರೆ ಆತನಿಗೆ ಜಾಮೀನು ನೀಡಬಹುದು. (ತಪ್ಪು)
12. ಹೆಣ್ಣು ಮಗಳೊಬ್ಬಳ ಎದೆಯ ಮೇಲಿನ ಬಟ್ಟೆಯನ್ನು ಆರೋಪಿ ಮುಟ್ಟಿದ್ದಲ್ಲಿ ಅದು ಲೈಂಗಿಕ ದೌರ್ಜನ್ಯವಲ್ಲ. (ತಪ್ಪು)

# ಅಪರಾಧ ಕಾನೂನಿನ ತಿದ್ದುಪಡಿ ಕಾಯ್ದೆ– 2013

**ಪ್ರಸ್ತಾವನೆ**

ಮಹಿಳೆಯರ ಮೇಲಿನ ಹಿಂಸೆಯ ಪ್ರಕರಣಗಳು ಪ್ರತಿನಿತ್ಯವೂ ವರದಿಯಾಗುತ್ತಲೇ ಇರುತ್ತವೆ. ಅದು ಅತ್ಯಾಚಾರ, ಆ್ಯಸಿಡ್ ಹಾಕುವುದು, ಹಿಂಬಾಲಿಸುವುದು ಇತ್ಯಾದಿ. ಹಿಂಸೆಯ ಸ್ವರೂಪ ಬದಲಾದಂತೆ ಕಾನೂನುಗಳೂ ಕಾಲಕಾಲಕ್ಕೆ ಬದಲಾವಣೆಗೊಳ್ಳಬೇಕಾಗುತ್ತದೆ. ಬದಲಾದ ಕಾನೂನಿನ ಅರಿವನ್ನು ಬೆಳೆಸಿಕೊಳ್ಳಬೇಕಾಗುತ್ತದೆ.

**ವಿಷಯ ವಿವರಣೆ**

ಡಿಸ್ಸೆಂಬರ್ 2012ರಲ್ಲಿ ದೆಹಲಿಯಲ್ಲಿ ಪಾರಾ ಮೆಡಿಕಲ್ ವಿದ್ಯಾರ್ಥಿನಿಯ ಮೇಲೆ ನಡೆದ ಅಮಾನವೀಯ ಮತ್ತು ಘೋರ ಅತ್ಯಾಚಾರವನ್ನು (ನಿರ್ಭಯಾ ಪ್ರಕರಣ) ಪ್ರತಿಭಟಿಸಿ ದೇಶದಾದ್ಯಂತ ವಿದ್ಯಾರ್ಥಿ ಸಂಘಟನೆಗಳು, ಮಹಿಳಾ ಸಂಘಟನೆಗಳು ಮತ್ತಿತರ ಪ್ರಗತಿಪರ ಸಂಘಟನೆಗಳು ಹೋರಾಟ ನಡೆಸಿದವು. ಇದರ ಫಲವಾಗಿ, ಕೇಂದ್ರ ಸರಕಾರವು ಮಹಿಳೆಯರ ಬಗೆಗಿನ ಹಲವು ಕಾನೂನುಗಳ ಪುನರ್ವಿಮರ್ಶೆ ಮಾಡಲು ಸರ್ವೋಚ್ಚ ನ್ಯಾಯಾಲಯದ ನಿವೃತ್ತ ನ್ಯಾಯಮೂರ್ತಿ ಜೆ. ಎಸ್. ವರ್ಮಾರ ನೇತೃತ್ವದಲ್ಲಿ ಸಮಿತಿಯನ್ನು ರಚಿಸಿತು. ಈ ಸಮಿತಿಯು ಮಹಿಳಾ ಕಾನೂನುಗಳನ್ನು ತಿದ್ದುಪಡಿ ಮಾಡಲು ಅನೇಕ ಶಿಫಾರಸ್ಸುಗಳನ್ನು ಮಾಡಿ ವರದಿ ಸಲ್ಲಿಸಿತು. ವರ್ಮಾ ಸಮಿತಿಯ ವರದಿಯನ್ನು ಪರಿಶೀಲಿಸಿ ಸರಕಾರ 2013ರ ಎಪ್ರಿಲ್ ತಿಂಗಳಲ್ಲಿ 'ಭಾರತೀಯ ದಂಡ ಸಂಹಿತೆ', 'ಅಪರಾಧ ಪ್ರಕ್ರಿಯಾ ಸಂಹಿತೆ' ಮತ್ತು 'ಅಪರಾಧ ಸಾಕ್ಷ್ಯ ಅಧಿನಿಯಮ'ಗಳಿಗೆ ತಿದ್ದುಪಡಿ ತಂದಿತು. ಕತುವಾ ಮತ್ತು ಉನ್ನಾವೋದಲ್ಲಿ ನಡೆದ ಅತ್ಯಾಚಾರ ಪ್ರಕರಣಗಳ ನಂತರ 2018ರಲ್ಲಿ ಈ ಕಾಯ್ದೆಯು ತಿದ್ದುಪಡಿಗೊಂಡಿರುತ್ತದೆ. ಇದನ್ನು 'ಅಪರಾಧ ಕಾನೂನಿನ ತಿದ್ದುಪಡಿ ಕಾಯ್ದೆ' ಎಂದು ಹೆಸರಿಸಲಾಗಿದೆ. ಈ ಕಾಯ್ದೆಯು ಮಹಿಳೆಯರ ಮೇಲಾಗುವ ಆ್ಯಸಿಡ್ ದಾಳಿ, ಲೈಂಗಿಕ ಕಿರುಕುಳ ಹಾಗೂ ಅತ್ಯಾಚಾರ, ಹಿಂಬಾಲಿಸುವಿಕೆ, ಕದ್ದು ನೋಡುವುದು, ಸಾಗಾಣಿಕೆ, ಬೆತ್ತಲೆಗೊಳಿಸುವಿಕೆಗಳನ್ನು ಪ್ರತ್ಯೇಕವಾದ ಅಪರಾಧಗಳೆಂದು ಪರಿಗಣಿಸಿ, ಶಿಕ್ಷೆಯನ್ನು ನಿಗದಿಪಡಿಸಿದೆ ಹಾಗೂ ಸಂಬಂಧಪಟ್ಟ ಅಧಿಕಾರಿಗಳು ಈ ಕಾನೂನಿನ ಬಗ್ಗೆ ನಿರ್ಲಕ್ಷ್ಯ ವಹಿಸಿದಲ್ಲಿ ಅವರನ್ನೂ ಹೊಣೆಗಾರರನ್ನಾಗಿಸಿದೆ.

**ಕಿರುಕುಳದ ಸ್ವರೂಪ ಮತ್ತು ಶಿಕ್ಷೆ**

| ಅಪರಾಧ | ವಿವರಣೆ | ಶಿಕ್ಷೆಯ ಪ್ರಮಾಣ |
|---|---|---|
| ಆಸಿಡ್ ದಾಳಿ (326ಎ) | ಯಾವುದೇ ವ್ಯಕ್ತಿಯು, ವ್ಯಕ್ತಿಗೆ ತೀವ್ರ ಸ್ವರೂಪದ ಅಂಗವಿಕಲತೆ ವಿರೂಪಗೊಳಿಸುವ ಉದ್ದೇಶದಿಂದ ಆಸಿಡ್ ಎರಚಿ, ಅದರಿಂದ ಆ ವ್ಯಕ್ತಿಯ ಅಂಗಾಂಗಗಳಿಗೆ ಖಾಯಂ/ತಾತ್ಕಾಲಿಕವಾದ ಹಾನಿ, ಅಂಗವಿಕಲತೆ ಉಂಟಾಗುವಂತೆ ಮಾಡುವುದು ಅಪರಾಧವೆನಿಸಿಕೊಳ್ಳುತ್ತದೆ. | ಅಪರಾಧಿಗೆ 10 ವರ್ಷಕ್ಕೆ ಕಡಿಮೆಯಿಲ್ಲದ, ಜೀವಾವಧಿಯವರೆಗೆ ವಿಸ್ತರಿಸಬಹುದಾದ ಜೈಲು ಶಿಕ್ಷೆಯನ್ನು ಮತ್ತು ದಂಡವನ್ನು ವಿಧಿಸಬಹುದು ಮತ್ತು ವಸೂಲು ಮಾಡಿದ ದಂಡದ ಮೊತ್ತವನ್ನು ಹಾನಿಗೊಳಗಾದ ವ್ಯಕ್ತಿಯ ವೈದ್ಯಕೀಯ ವೆಚ್ಚಕ್ಕಾಗಿ ಬಳಸಬಹುದು. |
| (326 ಬಿ) | ವ್ಯಕ್ತಿಗೆ ತೀವ್ರ ಸ್ವರೂಪದ ಅಂಗವಿಕಲತೆ, ವಿರೂಪಗೊಳಿಸುವ ಉದ್ದೇಶದಿಂದ, ಆಸಿಡ್ ಎರಚಲು ಯಾವುದೇ ವ್ಯಕ್ತಿ ಪ್ರಯತ್ನಿಸಿ (ಅಟೆಮ್ಟ್) ಅದರಿಂದ ಆ ವ್ಯಕ್ತಿಯ ದೇಹಕ್ಕೆ ತೀವ್ರ ಸ್ವರೂಪದ ಹಾನಿಯುಂಟಾದರೆ ಅದು ಅಪರಾಧವೆನಿಸಿ ಕೊಳ್ಳುತ್ತದೆ. | ಅಪರಾಧಿಗೆ 5 ವರ್ಷ ಕಡಿಮೆ ಇಲ್ಲದ, 7 ವರ್ಷಗಳವರೆಗೆ ವಿಸ್ತರಿಸಬಹುದಾದ ಜೈಲು ಶಿಕ್ಷೆಯನ್ನು ಮತ್ತು ದಂಡವನ್ನು ವಿಧಿಸಬಹುದು ಮತ್ತು ವಸೂಲು ಮಾಡಿದ ದಂಡದ ಮೊತ್ತವನ್ನು ಹಾನಿಗೊಳಗಾದ ವ್ಯಕ್ತಿಯ ವೈದ್ಯಕೀಯ ವೆಚ್ಚಕ್ಕಾಗಿ ಬಳಸಬಹುದು. |

| | | |
|---|---|---|
| ಲೈಂಗಿಕ ಕಿರುಕುಳ (354ಎ) | ಯಾವುದೇ ಪುರುಷನು ಮಹಿಳೆಗೆ ಇಷ್ಟವಿಲ್ಲದಿದ್ದರೂ ದೈಹಿಕ ಸಂಪರ್ಕವನ್ನು ಬಯಸುವುದು, ಲೈಂಗಿಕ ಸ್ವರೂಪದ ಯಾವುದೇ ಅನಪೇಕ್ಷಿತ ನಡವಳಿಕೆ, ಲೈಂಗಿಕ ಸಂದೇಶವುಳ್ಳ ಸಂಕೇತಗಳು, ಅಶ್ಲೀಲ ಚಿತ್ರಗಳನ್ನು ತೋರಿಸುವುದು ಮತ್ತು ಲೈಂಗಿಕ ಬೇಡಿಕೆಗಳನ್ನು ಮುಂದಿಡುವುದು ಅಪರಾಧವಾಗಿದೆ. | ಅಪರಾಧಗಳಿಗೆ 3 ವರ್ಷದವರೆಗೆ ವಿಸ್ತರಿಸ ಬಹುದಾದ ಕಠಿಣ ಜೈಲುವಾಸ ಹಾಗೂ ದಂಡವನ್ನು ವಿಧಿಸಲಾಗುವುದು. |
| ಬೆತ್ತಲೆಗೊಳಿಸುವುದು (354ಬಿ) | ಮಹಿಳೆಯನ್ನು ಬೆತ್ತಲೆಗೊಳಿಸುವ ಉದ್ದೇಶದಿಂದ ಅವಳ ಮೇಲೆ ಬಲ ಪ್ರಯೋಗಿಸುವುದು ಅಥವಾ ಆಕ್ರಮಣ ಮಾಡುವುದು | ಇದಕ್ಕೆ 3 ವರ್ಷ ಕಡಿಮೆಯಿಲ್ಲದ ಏಳು ವರ್ಷಗಳವರೆಗೆ ವಿಸ್ತರಿಸಬಹುದಾದ ಜೈಲುವಾಸದ ಶಿಕ್ಷೆ ಮತ್ತು ದಂಡವನ್ನು ವಿಧಿಸಲಾಗುವುದು. |
| ಕದ್ದು ನೋಡುವುದು (354 ಸಿ) | ಮಹಿಳೆಯು ಸ್ನಾನ ಮಾಡುವಾಗ/ಶೌಚಾಲಯ ಉಪಯೋಗಿಸುವಾಗ/ಲೈಂಗಿಕ ಕ್ರಿಯೆಯಲ್ಲಿದ್ದಾಗ/ ಬೆತ್ತಲೆಯಾಗಿದ್ದಾಗ ಇಣುಕಿ ನೋಡುವುದು (ವೋಯೆರಿಸಮ್), ಚಿತ್ರ ತೆಗೆಯುವುದು ಮತ್ತು ಮಾಧ್ಯಮಗಳಲ್ಲಿ ಪ್ರಸಾರ ಮಾಡುವುದು ಅಪರಾಧವಾಗಿದೆ. ಒಂದು ವೇಳೆ ಕದ್ದು ನೋಡುವಿಕೆಯನ್ನು ಮಹಿಳೆಯ ಒಪ್ಪಿಗೆಯಿದ್ದು, ಅವಳ ಚಿತ್ರಗಳನ್ನು ಪಸರಿಸಲು ಅವಳ ಒಪ್ಪಿಗೆಯಿಲ್ಲದಿದ್ದಾಗ ಅದೂ ಶಿಕ್ಷಾರ್ಹ ಅಪರಾಧವೆನಿಸಿಕೊಳ್ಳುತ್ತದೆ. | ಮೊದಲ ಅಪರಾಧವಾದರೆ ಒಂದು ವರ್ಷಕ್ಕೆ ಕಡಿಮೆಯಿಲ್ಲದ ಮೂರು ವರ್ಷದವರೆಗೆ ವಿಸ್ತರಿಸಬಹುದಾದ ಜೈಲುವಾಸ ಮತ್ತು ದಂಡ ಹಾಗೂ ಅದನ್ನು ಪುನರಾವರ್ತಿಸಿದಾಗ ಮೂರು ವರ್ಷಗಳಿಗೆ ಕಡಿಮೆಯಿಲ್ಲದ ಐದು ವರ್ಷಗಳವರೆಗೆ ವಿಸ್ತರಿಸಬಹುದಾದ ಜೈಲು ವಾಸ ಮತ್ತು ದಂಡವನ್ನು ವಿಧಿಸಲಾಗುವುದು. |
| ಹಿಂಬಾಲಿಸುವುದು (354ಡಿ) | ಯಾವುದೇ ಪುರುಷ ಮಹಿಳೆಯನ್ನು ಲೈಂಗಿಕ ಸಂಬಂಧ ಹೊಂದುವ ಉದ್ದೇಶದಿಂದ, ಅವಳಿಗೆ ಇಷ್ಟವಿಲ್ಲದಿದ್ದರೂ ಅಥವಾ ಅವನ ಬಗ್ಗೆ ನಿರಾಸಕ್ತಿ ತೋರಿಸಿದಾಗಲೂ ಅವಳನ್ನು ಹಿಂಬಾಲಿಸಿದರೆ ಅಥವಾ ಮಹಿಳೆ ಬಳಸುವ ಅಂತರ್ಜಾಲದ/ ಇಮೇಲ್ ಮತ್ತಿತರ ವಿದ್ಯುನ್ಮಾನ ಸಂವಹನ ಮಾಧ್ಯಮಗಳನ್ನು(ಎಲೆಕ್ಟ್ರಾನಿಕ್ ಕಮ್ಯುನಿಕೇಷನ್) ಗಮನಿಸುವುದು/ಮಾನಿಟರ್ ಮಾಡುವುದು– ಇದೆಲ್ಲವನ್ನು 'ಹಿಂಬಾಲಿಸುವುದು' (ಸ್ಟಾಕಿಂಗ್) ಎನ್ನಲಾಗುವುದು. ಇದು ಶಿಕ್ಷಾರ್ಹ ಅಪರಾಧ. ಆದರೆ ಅಧಿಕೃತವಾಗಿ ಸರಕಾರದ ಅನುಮತಿಯಿಂದ ಮತ್ತು ಅಪರಾಧ ತಡೆಯುವ ಉದ್ದೇಶದಿಂದ ಹಿಂಬಾಲಿಸಿದರೆ ಅದು ಅಪರಾಧವಾಗುವುದಿಲ್ಲ. | ಮೊದಲ ಅಪರಾಧವಾದರೆ ಒಂದು ವರ್ಷಕ್ಕೆ ಕಡಿಮೆಯಿಲ್ಲದ ಮೂರು ವರ್ಷದವರೆಗೆ ವಿಸ್ತರಿಸಬಹುದಾದ ಜೈಲುವಾಸ ಮತ್ತು ದಂಡ ಹಾಗೂ ಅದನ್ನು ಪುನರಾವರ್ತಿಸಿದಾಗ ಮೂರು ವರ್ಷಗಳಿಗೆ ಕಡಿಮೆಯಿಲ್ಲದ, ಐದು ವರ್ಷಗಳವರೆಗೆ ವಿಸ್ತರಿಸಬಹುದಾದ ಜೈಲು ವಾಸ ಮತ್ತು ದಂಡವನ್ನು ವಿಧಿಸಲಾಗುವುದು. |

| | | |
|---|---|---|
| ಸಾಗಾಣಿಕೆ (370) | ಬೆದರಿಕೆ ಒಡ್ಡುವ ಮೂಲಕ ಮತ್ತು ಯಾವುದೇ ರೀತಿಯ ಬಲ ಪ್ರಯೋಗದ ಮೂಲಕ ಅಥವಾ ಅಪಹರಣದ ಮೂಲಕ ಅಥವಾ ಮೋಸ ಗೊಳಿಸುವ ಮೂಲಕ ಅಥವಾ ಅಧಿಕಾರ ದುರುಪಯೋಗದ ಮೂಲಕ ಅಥವಾ ಆಮಿಷದ ಮೂಲಕ ಶೋಷಿಸುವ ಸಲುವಾಗಿ ವ್ಯಕ್ತಿಯನ್ನು ಅಥವಾ ವ್ಯಕ್ತಿಗಳನ್ನು ನೇಮಿಸಿಕೊಳ್ಳುವುದು ಅಥವಾ ಸಾಗಾಟ ನಡೆಸುವುದು, ಆಶ್ರಯ ನೀಡುವುದು, ವರ್ಗಾಯಿಸುವುದು ಅಥವಾ ಪಡೆಯುವುದನ್ನು ವ್ಯಕ್ತಿಯ ಸಾಗಾಣಿಕೆ ಅಥವಾ ಟ್ರಾಫಿಕಿಂಗ್ ಎನ್ನುತ್ತಾರೆ. | • 7 ವರ್ಷಕ್ಕೆ ಕಡಿಮೆಯಿಲ್ಲದ, ಹತ್ತು ವರ್ಷದ ವರೆಗೆ ವಿಸ್ತರಿಸಬಹುದಾದ ಕಠಿಣ ಜೈಲು ಶಿಕ್ಷೆ ಮತ್ತು ದಂಡವನ್ನು ವಿಧಿಸಬಹುದಾಗಿದೆ.<br>• ಒಂದಕ್ಕಿಂತ ಹೆಚ್ಚಿನ ವ್ಯಕ್ತಿಗಳನ್ನು ಸಾಗಾಣಿಕೆಗೆ ಒಳಪಡಿಸಿದರೆ 10 ವರ್ಷಕ್ಕಿಂತ ಕಡಿಮೆ ಇಲ್ಲದ, ಜೀವಾವಧಿಯವರೆಗೆ ವಿಸ್ತರಿಸಬಹುದಾದ ಕಠಿಣ ಜೈಲು ಶಿಕ್ಷೆಗೆ ಒಳಪಡಿಸಬಹುದು ಮತ್ತು ದಂಡ ವಿಧಿಸಬಹುದು.<br>• ಸಾಗಾಣಿಕೆಗೆ ಒಳಪಡಿಸಿದ ವ್ಯಕ್ತಿ ಅಪ್ರಾಪ್ತ ವಯಸ್ಸಿನವನಾಗಿದ್ದರೆ ಅಪರಾಧಿಗೆ 10 ವರ್ಷ ಕಡಿಮೆ ಇಲ್ಲದೆ ಜೀವಾವಧಿಯುವರೆ ವಿಸ್ತರಿಸಬಹುದಾದ ಜೈಲು ಶಿಕ್ಷೆ ಮತ್ತು ದಂಡ ವಿಧಿಸಲಾಗವುದು.<br>• ಒಂದಕ್ಕಿಂತ ಹೆಚ್ಚು ಅಪ್ರಾಪ್ತ ವಯಸ್ಸಿನವರನ್ನು ಸಾಗಾಣಿಕೆಗೆ ಒಳಪಡಿಸಿದರೆ ಅಪರಾಧಿಗೆ 14 ವರ್ಷ ಕಡಿಮೆ ಇಲ್ಲದೆ ಜೀವಾವಧಿಯುವರೆ ವಿಸ್ತರಿಸಬಹುದಾದ ಜೈಲು ಶಿಕ್ಷೆ ಮತ್ತು ದಂಡ ವಿಧಿಸಲಾಗವುದು.<br>• ಅಪರಾಧಿಯು ಅಪರಾಧ'ವನ್ನು ಮರುಕಳಿಸಿದ ಪಕ್ಷದಲ್ಲಿ ಜೀವಾವಧಿ ಶಿಕ್ಷೆ ಮತ್ತು ದಂಡಕ್ಕೆ ಒಳಗಾಗುತ್ತಾನೆ.<br>• ಯಾವುದೇ ಸರಕಾರಿ ನೌಕರ ಮತ್ತು ಪೊಲೀಸು ಅಧಿಕಾರಿ ಈ ಅಪರಾಧವೆಸಗಿದಲ್ಲಿ ಜೀವಾವಧಿ ಮತ್ತು ದಂಡ ವಿಧಿಸಲಾಗುವುದು. |
| ಸಾಗಾಣಿಕೆ (370ಎ) | • ಇಲ್ಲಿ ಶೋಷಣೆ ಎಂದರೆ ದೈಹಿಕ ಮತ್ತು ಲೈಂಗಿಕ ಶೋಷಣೆ, ಜೀತಕ್ಕೆ ಅಥವಾ ದಾಸ್ಯಕ್ಕೆ ಒಳಪಡಿಸುವುದು, ಅಂಗಾಂಗಗಳನ್ನು ತೆಗೆಯುವುದು ಇತ್ಯಾದಿಗಳನ್ನು ಸೇರಿಸಲಾಗಿದೆ. ಇಲ್ಲಿ ಶೋಷಣೆಗೆ/ಸಾಗಾಣಿಕೆಗೆ ಒಳಗಾದ ವ್ಯಕ್ತಿಯ ಒಪ್ಪಿಗೆಯು ಅಪ್ರಸ್ತುತ.<br>• ಯಾವುದೇ ಅಪ್ರಾಪ್ತ ವಯಸ್ಸಿನ ಮಗು ಸಾಗಾಣಿಕೆಗೆ ಒಳಗಾದ ಮಗು ಎಂದು ತಿಳಿದಿದ್ದರೂ ಸಹ ಲೈಂಗಿಕ ಶೋಷಣೆಗೆ ಒಳಪಡಿಸುವುದು ಶಿಕ್ಷಾರ್ಹ ಅಪರಾಧವಾಗಿರುತ್ತದೆ.<br>• ಯಾವುದೇ ವ್ಯಕ್ತಿಯನ್ನು ಸಾಗಾಣಿಕೆಗೆ ಒಳಗಾದ ವ್ಯಕ್ತಿ ಎಂದು ತಿಳಿದಿದ್ದರೂ ಸಹ ಲೈಂಗಿಕ ಶೋಷಣೆಗೆ ಒಳಪಡಿಸುವುದು ಶಿಕ್ಷಾರ್ಹ ಅಪರಾಧವಾಗಿರುತ್ತದೆ. | • 5 ವರ್ಷ ಕಡಿಮೆಯಿಲ್ಲದ 7 ವರ್ಷಕ್ಕೆ ವಿಸ್ತರಿಸಬಹುದಾದ ಜೈಲು ಶಿಕ್ಷೆ ಮತ್ತು ದಂಡ ವಿಧಿಸಲಾಗುವುದು.<br>• 3 ವರ್ಷ ಕಡಿಮೆಯಿಲ್ಲದ 5 ವರ್ಷಕ್ಕೆ ವಿಸ್ತರಿಸಬಹುದಾದ ಜೈಲು ಶಿಕ್ಷೆ ಮತ್ತು ದಂಡ ವಿಧಿಸಲಾಗುವುದು |

| | | |
|---|---|---|
| ಅತ್ಯಾಚಾರ (375) | ಯಾವನೇ ಒಬ್ಬ ಪುರುಷ ತನ್ನ ಶಿಶ್ನ ಅಥವಾ ಯಾವುದೇ ಇತರ ವಸ್ತುವನ್ನು ಮಹಿಳೆಯ ಯೋನಿ, ಬಾಯಿ, ಗುದದ್ವಾರಕ್ಕೆ ತೂರಿಸಿದರೆ, ಅಥವಾ ದೇಹದ ಯಾವುದೇ ಭಾಗವನ್ನು ದುರುಪಯೋಗಪಡಿಸಿ ತೂರಿಸುವಿಕೆಯನ್ನು ಸಾಧ್ಯವಾಡಿದರೆ, ತನಗೆ/ಇತರರಿಗೆ ಹಾಗೆ ಮಾಡುವಂತೆ ಮಹಿಳೆಯನ್ನು ಒತ್ತಾಯಪಡಿಸಿದರೆ, ತನ್ನ ಬಾಯಿಯನ್ನು ಮಹಿಳೆಯ ಯೋನಿ, ಮೂತ್ರದ್ವಾರ, ಗುದದ್ವಾರಕ್ಕೆ ತಾಗಿಸಿ ಲೈಂಗಿಕತೆಗೆ ತೊಡಗಿದರೆ, ಅದು ಈ ಕೆಳಗಿನ ಸಂದರ್ಭಗಳಲ್ಲಿ ಅತ್ಯಾಚಾರ ಎನಿಸಿಕೊಳ್ಳುವುದು :<br>1. ಆಕೆಯ ಇಚ್ಛೆಗೆ ವಿರುದ್ಧವಾಗಿ<br>2. ಆಕೆಯ ಒಪ್ಪಿಗೆ ಇಲ್ಲದೆ<br>3. ಆಕೆಗೆ ಅಥವಾ ಆಕೆಗೆ ಬೇಕಾಗಿರುವ ಇತರ ಯಾವುದೇ ವ್ಯಕ್ತಿಗೆ ಜೀವ ಭಯ ಅಥವಾ ಹಿಂಸೆಯನ್ನು ನೀಡುವುದಾಗಿ ಬೆದರಿಸಿ ಆಕೆಯ ಒಪ್ಪಿಗೆಯನ್ನು ಪಡೆದಿದ್ದರೆ<br>4. ಆಕೆಂಯುನ್ನು ಕಾನೂನಾತ್ಮಕವಾಗಿ ವಿವಾಹವಾಗಿರುವ ಗಂಡನೆಂದು ನಂಬಿಸಿ ಆಕೆಯ ಒಪ್ಪಿಗೆಯನ್ನು ಪಡೆದಿದ್ದರೆ<br>5. ಆಕೆಂಯು ಒಪ್ಪಿಗೆಂಯುನ್ನು ಪಡೆಂಯುವ ಸಂದರ್ಭದಲ್ಲಿ ಆಕೆ ಬುದ್ಧಿಮಾಂದ್ಯಳಾಗಿದ್ದರೆ ಅಥವಾ ನಶೆಯಲ್ಲಿದ್ದರೆ ಅಥವಾ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಇನ್ನೊಬ್ಬ ವ್ಯಕ್ತಿಯ ಮೂಲಕ ಯಾವುದೇ ಮಾದಕ ಪದಾರ್ಥವನ್ನು ಆಕೆ ಸೇವಿಸುವಂತೆ ಮಾಡಿ ಅದರ ಪರಿಣಾಮದ ಪರಿಜ್ಞಾನವು ಆಕೆಗೆ ಇಲ್ಲದಿದ್ದ ಸಂದರ್ಭ ಒಪ್ಪಿಗೆ ಪಡೆದಿದ್ದರೆ<br>6. ಒಪ್ಪಿಗೆಯಿರಲಿ, ಒಪ್ಪಿಗೆಯಿಲ್ಲದಿರಲಿ ಅಪ್ರಾಪ್ತ ವಯಸ್ಸಿನವಳಾಗಿದ್ದರೆ<br>7. ಆಕೆಗೆ ತನ್ನ ಒಪ್ಪಿಗೆಯನ್ನು ಮಾತು, ಸನ್ನೆ ಅಥವಾ ಇನ್ನಿತರ ಯಾವುದೇ ರೂಪದಲ್ಲಿ ವ್ಯಕ್ತಪಡಿಸಲು ಸಾಧ್ಯವಾಗದಾಗ ಅದು ಅತ್ಯಾಚಾರ ಎನಿಸಿಕೊಳ್ಳುತ್ತದೆ. | ಅತ್ಯಾಚಾರಕ್ಕೆ 7 ವರ್ಷಗಳಿಗಿಂತ ಕಡಿಮೆಯಿಲ್ಲದ, ಜೀವಾವಧಿಯವರೆಗೆ ವಿಸ್ತರಿಸಬಹುದಾದ ಕಠಿಣ ಸೆರೆವಾಸ ಹಾಗೂ ದಂಡವನ್ನು ವಿಧಿಸಬಹುದು. |
| 16 ವರ್ಷದ ಒಳಗಿನ ಹೆಣ್ಣು ಮಗುವಿನ ಮೇಲೆ ಸಾಮೂಹಿಕ ಅತ್ಯಾಚಾರ ಎಸಗಿದರೆ 376(3) | 16 ವರ್ಷ ವಯಸ್ಸಿನೊಳಗಿನ ಹೆಣ್ಣು ಮಗುವಿನ ಮೇಲೆ ಅತ್ಯಾಚಾರ ಎಸಗಿದ್ದಲ್ಲಿ ಅಪರಾಧ ಎನಿಸಿಕೊಳ್ಳುತ್ತದೆ. | ಕನಿಷ್ಠ 20 ವರ್ಷ ತೀವ್ರತರದ ಜೈಲು ಶಿಕ್ಷೆ ಯಿಂದ ಜೀವಾವಧಿ ಶಿಕ್ಷೆ ಮತ್ತು ದಂಡಕ್ಕೆ ಒಳಗಾಗುತ್ತಾನೆ. |





| | | |
|---|---|---|
| ರಕ್ಷೆಯಲ್ಲಿರುವಾಗ ಅತ್ಯಾಚಾರ (376 ಎಸಿ) | ಕೆಲವು ಪ್ರಭಾವಿ ಸ್ಥಾನದಲ್ಲಿರುವ ವ್ಯಕ್ತಿಗಳು ತಮ್ಮ ಸ್ಥಾನವನ್ನು ದುರುಪಯೋಗಪಡಿಸಿಕೊಂಡು ತಮ್ಮ ರಕ್ಷೆಯಲ್ಲಿರುವ ಹೆಂಗಸರನ್ನು ಲೈಂಗಿಕ ಕ್ರಿಯೆಗೆ ಬಲವಂತಪಡಿಸಿದರೆ ಅದು ಗುರುತರದ ಅಪರಾಧವೆನಿಸಿಕೊಳ್ಳುತ್ತದೆ. ಇಂತಹವರಿಗಾಗಿ ವಿಶೇಷ ನಿಯಮಗಳನ್ನು ಮಾಡಲಾಗಿದೆ. ಶಿಕ್ಷೆಯೂ ಸಹ ಹೆಚ್ಚಿನ ಪ್ರಮಾಣದ್ದಾಗಿರುತ್ತದೆ. ಪ್ರಭಾವಿ ವ್ಯಕ್ತಿಗಳು–<br>1. ಪೊಲೀಸು ಅಧಿಕಾರಿ ತನ್ನ ವ್ಯಾಪ್ತಿಯೊಳಗೆ ಕರ್ತವ್ಯ ನಿರ್ವಹಿಸುತ್ತಿರುವ ಸಮಯದಲ್ಲಿ ತನ್ನ ಪೊಲೀಸು ಠಾಣೆಯ ಒಳಗೆ ಯಾ ತನ್ನ ಕೈಕೆಳಗಿನ ಅಧಿಕಾರಿಗಳ ಅಭಿರಕ್ಷೆಯಡಿ ಇರುವ ಮಹಿಳೆಯರ ಮೇಲೆ<br>2. ಸಾರ್ವಜನಿಕ ಅಧಿಕಾರಿ ತನ್ನ ಅಥವಾ ತನ್ನ ಕೈಕೆಳಗಿನ ಅಧಿಕಾರಿಗಳ ಅಭಿರಕ್ಷೆಯಡಿ ಇರುವ ಮಹಿಳೆಯ ಮೇಲೆ<br>3. ಕೇಂದ್ರ ಯಾ ರಾಜ್ಯ ಸರಕಾರದ ಅಡಿ ನಿಯೋಜಿಸಲ್ಪಟ್ಟ ಭದ್ರತಾ/ಸೇನಾ ಪಡೆಯ ಸದಸ್ಯ ತನ್ನ ಕಾರ್ಯಕ್ಷೇತ್ರ ಅಥವಾ ಹೊರಗಡೆ<br>4. ಸರಕಾರಿ ನೌಕರ, ಸೆರೆಮನೆಯ ಅಧಿಕಾರಿ, ಪರಿವೀಕ್ಷಣಾಧಿಕಾರಿ ಅಥವಾ ಮಕ್ಕಳ ಜವಾಬ್ದಾರಿ ಹೊತ್ತಿರುವ ವ್ಯಕ್ತಿ<br>5. ಆಸ್ಪತ್ರೆಯ ಆಡಳಿತಾಧಿಕಾರಿ, ಸಿಬ್ಬಂದಿ<br>6. ಕುಟುಂಬದ ಸದಸ್ಯರು, ಅಭಿರಕ್ಷಕರು, ಶಿಕ್ಷಕರು<br>**ಸಂದರ್ಭಗಳು**<br>1. ಕೋಮು, ಜಾತಿ ಗಲಭೆಗಳ ಸಂದರ್ಭಗಳಲ್ಲಿ<br>2. ಗರ್ಭಿಣಿ ಮಹಿಳೆಯ ಮೇಲೆ<br>3. ಅಪ್ರಾಪ್ತ ವಯಸ್ಸಿನ ಅಂದರೆ 18 ವರ್ಷಕ್ಕಿಂತ ಕಡಿಮೆ ವಯಸ್ಸಿನ ಬಾಲೆಯ ಮೇಲೆ<br>4. ಮಹಿಳೆ ಒಪ್ಪಿಗೆ ಕೊಡಲು ಅಸಾಧ್ಯವಾದ ಸಂದರ್ಭಗಳಲ್ಲಿ<br>5. ಮಹಿಳೆಯ ಮೇಲೆ ಅಧಿಕಾರ ಸ್ಥಾನದಲ್ಲಿರುವವರು<br>6. ಮಾನಸಿಕ ಹಾಗೂ ದೈಹಿಕ ಅಂಗವಿಕಲತೆಯುಳ್ಳ ಮಹಿಳೆಯ ಮೇಲೆ ಮಾಡುವ ಅತ್ಯಾಚಾರ ಘೋರ ಅಪರಾಧವೆನಿಸಿಕೊಳ್ಳತ್ತದೆ. | ಅತ್ಯಾಚಾರವೆಸಗಿ ದೈಹಿಕವಾಗಿ ತೀವ್ರವಾದ ಹಾನಿ ಉಂಟು ಮಾಡಿದ ಸಂದರ್ಭದಲ್ಲಿ ಅಪರಾಧಿಗೆ 10 ವರ್ಷದಿಂದ ಜೀವಾವಧಿ ಶಿಕ್ಷೆ ಮತ್ತು ದಂಡವನ್ನು ವಿಧಿಸಲಾಗುವುದು. ಅತ್ಯಾಚಾರದ ಪರಿಣಾಮವಾಗಿ ಮಹಿಳೆಗೆ ತೀವ್ರ ಸ್ವರೂಪದ ದೈಹಿಕ ಹಾನಿಗೊಳಗಾಗಿ ಸಾವನ್ನಪ್ಪಿದರೆ ಇಲ್ಲವೇ ಜೀವಚ್ಛವ ಸ್ಥಿತಿ ತಲುಪಿದರೆ, ಆಗ ಅಪರಾಧಿಗೆ 20 ವರ್ಷ, ಜೀವಾವಧಿ ಇಲ್ಲವೆ ಗಲ್ಲು ಶಿಕ್ಷೆಯನ್ನು ನೀಡಬಹುದು. |
| ವೈವಾಹಿಕ ಸಂಬಂಧದೊಳಗೆ ಅತ್ಯಾಚಾರ (376ಬಿ) | ಕಾನೂನು ಪ್ರಕಾರ ಪ್ರತ್ಯೇಕವಾಗಿ ವಾಸಿಸುವ ಹೆಂಡತಿಯ ಒಪ್ಪಿಗೆ ಇಲ್ಲದೆ ನಡೆಸಿದ ಲೈಂಗಿಕ ಕ್ರಿಯೆಯು ಅತ್ಯಾಚಾರ ಎನಿಸಿಕೊಳ್ಳುತ್ತದೆ. ಸುಪ್ರೀಂ ಕೋರ್ಟು ತೀರ್ಪಿನ ಪ್ರಕಾರ 18 ವರ್ಷಕ್ಕಿಂತ ಕಡಿಮೆ ವಯಸ್ಸಿನ ಪತ್ನಿಯೊಂದಿಗೆ ಲೈಂಗಿಕ ಸಂಬಂಧ ಅತ್ಯಾಚಾರವೆನಿಸುತ್ತದೆ. | ಇದಕ್ಕೆ ಅವನು ಎರಡರಿಂದ ಏಳು ವರ್ಷಗಳ ಒಳಗಿನ ಶಿಕ್ಷೆಯನ್ನು ಅನುಭವಿಸಬೇಕು. |

| | | |
|---|---|---|
| ಸಾಮೂಹಿಕ ಅತ್ಯಾಚಾರ (376ಡಿ) | ಒಬ್ಬರಿಗಿಂತ ಹೆಚ್ಚು ವ್ಯಕ್ತಿಗಳು ಅತ್ಯಾಚಾರ ಮಾಡಿದರೆ ಅವರೆಲ್ಲರೂ ಈ ವಿಧಿಯಡಿ ತಪಪಿತಸ್ಥರೆನಿಸಿಕೊಳ್ಳುವರು. | ಅವರಿಗೆ 20 ವರ್ಷದಿಂದ ಜೀವಾವಧಿ ಶಿಕ್ಷೆ ಮತ್ತು ಜುಲ್ಮಾನೆಯನ್ನು ವಿಧಿಸಲಾಗುವುದು. |
| ಅಪರಾಧವನ್ನು ಪುನರಾವರ್ತಿಸುವವರು (376ಇ) | ಅಪರಾಧಿಯು ಈಗಾಗಲೇ ಅತ್ಯಾಚಾರ ಪ್ರಕರಣದಲ್ಲಿ ಶಿಕ್ಷೆಗೊಳಗಾಗಿದ್ದು ಅಪರಾಧ ಮತ್ತೊಮ್ಮೆ ಮರುಕಳಿಸಿದರೆ | ಅಪರಾಧಿಗೆ ಜೀವವಾಧಿ ಶಿಕ್ಷೆ ಅಥವಾ ಮರಣದಂಡನೆ ವಿಧಿಸಬಹುದಾಗಿದೆ. |
| 12 ವರ್ಷದ ಒಳಗಿನ ಹೆಣ್ಣು ಮಗುವಿನ ಮೇಲೆ ಅತ್ಯಾಚಾರ ಎಸಗಿದರೆ (376ಎಬಿ) | 12 ವರ್ಷ ವಯಸ್ಸಿನೊಳಗಿನ ಹೆಣ್ಣು ಮಗುವಿನ ಮೇಲೆ ಅತ್ಯಾಚಾರ ಎಸಗಿದ್ದಲ್ಲಿ ಅಪರಾಧವೆನಿಸುತ್ತದೆ. | ಅಪರಾಧಿಯು ಕನಿಷ್ಠ 20 ವರ್ಷ ತೀವ್ರತರದ ಜೈಲು ಶಿಕ್ಷೆಯಿಂದ ಜೀವಾವಧಿ ಶಿಕ್ಷೆ ಮತ್ತು ದಂಡಕ್ಕೆ ಒಳಗಾಗುತ್ತಾನೆ. ಮರಣ ದಂಡನೆಯನ್ನು ವಿಧಿಸಬಹುದಾಗಿದೆ. ದಂಡದ ಮೊತ್ತವು ಸಮಂಜಸವಾಗಿದ್ದು, ಸಂತ್ರಸ್ತೆಯ ವೈದ್ಯಕೀಯ ಮತ್ತು ಪುನರ್ವಸತಿ ವೆಚ್ಚವನ್ನು ಭರಿಸುವಂತಿರಬೇಕು. |
| 16 ವರ್ಷದ ಒಳಗಿನ ಹೆಣ್ಣು ಮಗುವಿನ ಮೇಲೆ ಅತ್ಯಾಚಾರ ಎಸಗಿದರೆ (376ಡಿಎ) | 16 ವರ್ಷ ವಯಸ್ಸಿನೊಳಗಿನ ಹೆಣ್ಣು ಮಗುವಿನ ಮೇಲೆ ಸಾಮೂಹಿಕ ಅತ್ಯಾಚಾರ ಎಸಗಿದ್ದಲ್ಲಿ ಅಪರಾಧವೆನಿಸುತ್ತದೆ. | ಅಪರಾಧಿಗಳಿಗೆ ಕನಿಷ್ಠ ಜೀವಾವಧಿ ಶಿಕ್ಷೆ ಮತ್ತು ದಂಡಕ್ಕೆ ಒಳಗಾಗುತ್ತಾನೆ. |
| 12 ವರ್ಷದ ಒಳಗಿನ ಹೆಣ್ಣು ಮಗುವಿನ ಮೇಲೆ ಸಾಮೂಹಿಕ ಅತ್ಯಾಚಾರ ಎಸಗಿದರೆ (376ಡಿಬಿ) | 12 ವರ್ಷ ವಯಸ್ಸಿನೊಳಗಿನ ಹೆಣ್ಣು ಮಗುವಿನ ಮೇಲೆ ಸಾಮೂಹಿಕ ಅತ್ಯಾಚಾರ ಎಸಗಿದ್ದಲ್ಲಿ ಅಪರಾಧವೆನಿಸುತ್ತದೆ. | ಅಪರಾಧಿಗಳಿಗೆ ಕನಿಷ್ಠ ಜೀವಾವಧಿ ಶಿಕ್ಷೆ ಮತ್ತು ದಂಡಕ್ಕೆ ಒಳಗಾಗುತ್ತಾನೆ ಅಥವಾ ಮರಣ ದಂಡನೆಯನ್ನು ವಿಧಿಸಬಹುದಾಗಿದೆ. |

**ಅಪರಾಧ ಪ್ರಕ್ರಿಯೆ ಸಂಹಿತೆಗೆ ತಿದ್ದುಪಡಿ**

- ಅಪರಾಧಿಯು 16 ವರ್ಷ ಒಳಪಟ್ಟ ಹೆಣ್ಣು ಮಗುವಿನ ಮೇಲೆ ಅತ್ಯಾಚಾರವೆಸಗಿದಲ್ಲಿ ಅಪರಾಧಿಗೆ ಅಪರಾಧ ಪ್ರಕ್ರಿಯೆ ಸಂಹಿತೆಯಡಿ ಕಲಂ 438 ರಲ್ಲಿ ನಿರೀಕ್ಷಣಾ ಜಾಮೀನು ನೀಡುವಂತಿಲ್ಲ.
- ಅತ್ಯಾಚಾರ ಪ್ರಕರಣಗಳಲ್ಲಿ 2 ತಿಂಗಳಿನೊಳಗೆ ತನಿಖೆಯನ್ನು ಪೂರ್ಣಗೊಳಿಸತಕ್ಕದ್ದು.
- ಅಪರಾಧ ಸಾಬೀತಾದಲ್ಲಿ ಅಪರಾಧಿಯು ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸಿದಲ್ಲಿ 6 ತಿಂಗಳೊಳಗಾಗಿ ನ್ಯಾಯಾಲಯವು ಪ್ರಕರಣವನ್ನು ವಿಲೇವಾರಿಗೊಳಿಸತಕ್ಕದ್ದು.

**ಮೌಲ್ಯ ಮಾಪನ**

1. ಪುರುಷನು ಮಹಿಳೆಯ ಇಚ್ಚೆಗೆ ವಿರುದ್ಧವಾಗಿ ಲೈಂಗಿಕತೆಯಲ್ಲಿ ತೊಡಗಿದರೆ ಅದು ಅಪರಾಧವಲ್ಲ. (ತಪ್ಪು)
2. 18 ವರ್ಷಕ್ಕಿಂತ ಕಡಿಮೆ ವಯಸ್ಸಿನ ಪತ್ನಿಯೊಂದಿಗಿನ ಲೈಂಗಿಕ ಸಂಬಂಧ ಅಪರಾಧವೆನಿಸುತದೆ. (ಸರಿ)
3. ಒಂದು ಸಲ ಅತ್ಯಾಚಾರ ಮಾಡಿದವರು ಮತ್ತೆ ಮತ್ತೆ ಅಂತಹ ತಪ್ಪು ಮಾಡಿದರೆ 5 ವರ್ಷಗಳವರೆಗೆ ಜೈಲು ಶಿಕ್ಷೆ ವಿಧಿಸಲಾಗುವುದು. (ತಪ್ಪು)
4. ಲೈಂಗಿಕ ಕಾರ್ಯಕರ್ತೆಯೊಡನೆ ಆಕೆಯ ಒಪ್ಪಿಗೆಯಿಲ್ಲದೆ ಲೈಂಗಿಕ ಸಂಪರ್ಕ ಮಾಡಬಹುದು.(ತಪ್ಪು)
5. ಚಾರ್ಜ್ ಶೀಟ್ ದಾಖಲಿಸಿದ ಎರಡು ತಿಂಗಳೊಳಗೆ ವಿಚಾರಣೆಯನ್ನು ಪೂರ್ಣಗೊಳಿಸಬೇಕು.(ಸರಿ)
6. ನ್ಯಾಯಾಲಯದಲ್ಲಿ ಮೌಖಿಕ ಸಾಕ್ಷಿ ನೀಡಬಹುದು. (ಸರಿ)
7. ಸಾಗಾಣಿಕೆಗೆ ಒಳಗಾದ ವ್ಯಕ್ತಿಯು ಒಪ್ಪಿಗೆಯಿದ್ದೂ ಸಾಗಾಣಿಕೆ ನಡೆಸಿದರೆ ಅದು ಅಪರಾಧವಾಗುವುದಿಲ್ಲ. (ತಪ್ಪು)
8. ಅತ್ಯಾಚಾರಕ್ಕೆ ಒಳಗಾದ ಮಹಿಳೆ ಸರಕಾರಿ ಆಸ್ಪತ್ರೆಯಿಂದ ಮಾತ್ರ ವೈದ್ಯಕೀಯ ಸೇವೆ ಪಡೆಯಬೇಕು. (ತಪ್ಪು)
9. ಸರಕಾರದ ಆದೇಶದ ಮೇರೆಗೆ ಅಪರಾಧ ತಡೆಯುವ ಉದ್ದೇಶದಿಂದ ಮಹಿಳೆಯನ್ನು ಹಿಂಬಾಲಿಸಬಹುದು. (ಸರಿ)
10. ಪ್ರಭಾವಿ ವ್ಯಕ್ತಿಗಳು ತಮ್ಮ ರಕ್ಷೆಯಲ್ಲಿರುವ ಹೆಂಗಸನ್ನು ಲೈಂಗಿಕ ಕ್ರಿಯೆಗೆ ಬಲವಂತಪಡಿಸಿದರೆ ಅವರಿಗೆ ಶಿಕ್ಷೆಯಾಗುವುದಿಲ್ಲ. (ತಪ್ಪು)

# ಬಾಲ್ಯ ವಿವಾಹ ನಿಷೇಧ ಕಾಯ್ದೆ – 2006

**ಪ್ರಸ್ತಾವನೆ**

ನಾವು ಚಿಕ್ಕವರಿದ್ದಾಗ ಮದುವೆಯ ಆಟವಾಡಿ ಖುಷಿಪಟ್ಟಿದ್ದು ನೆನಪಿದೆಯಲ್ಲವೇ? ಆದರೆ ಅದು ಆಟ ಮಾತ್ರ. ನಿಜವಾಗಿಯೂ ಆಡುವ ಮಕ್ಕಳಿಗೆ ಮದುವೆ ಮಾಡಿದರೆ? ಅದು ಆ ಮಕ್ಕಳ ಬಾಲ್ಯವನ್ನು ಕಸಿಯುತ್ತದೆ. ಬಾಲ್ಯ ವಿವಾಹದಿಂದಾಗಿ ಮಕ್ಕಳು ಲೈಂಗಿಕ, ಮಾನಸಿಕ, ದೈಹಿಕ ಹಿಂಸೆ ಶೋಷಣೆಗಳಿಗೆ ಒಳಗಾಗಿ ಅನೇಕ ಹಕ್ಕುಗಳಿಂದ ವಂಚಿತರಾಗುತ್ತಿದ್ದಾರೆ. ನಮ್ಮ ಸಮಾಜದ ಅಭಿವೃದ್ಧಿಯನ್ನು ಕಾಡುವ ಪಿಡುಗುಗಳಲ್ಲಿ ಬಾಲ್ಯವಿವಾಹವು ಪ್ರಮುಖವಾದುದು.

**ಬಾಲ್ಯ ವಿವಾಹ ಎಂದರೆ**

ಕಾನೂನು ನಿಗದಿಪಡಿಸಿರುವ 18 ವರ್ಷದೊಳಗಿನ ಹೆಣ್ಣು ಮತ್ತು 21 ವರ್ಷದೊಳಗಿನ ಗಂಡು ಮಕ್ಕಳ ಮದುವೆಯು ಬಾಲ್ಯ ವಿವಾಹ ಎನಿಸಿಕೊಳ್ಳುತ್ತದೆ. ಮದುವೆಯಾಗುವವರಲ್ಲಿ ಯಾರಾದರೂ ಒಬ್ಬರ ಅಥವಾ ಇಬ್ಬರ (ವಧು ಅಥವಾ ವರ) ಪ್ರಾಯವು ಮೇಲೆ ಸೂಚಿಸಿದ್ದಕ್ಕಿಂತ ಕಡಿಮೆ ಇದ್ದರೂ ಅದು ಬಾಲ್ಯ ವಿವಾಹವೆನಿಸಿಕೊಳ್ಳುತ್ತದೆ.

**ಕಾನೂನು ಕ್ರಮಗಳು**

ಬಾಲ್ಯ ವಿವಾಹವು ಮಕ್ಕಳ ಮೇಲೆ ಅತ್ಯಂತ ಭೀಕರ ಪರಿಣಾಮಗಳನ್ನು ಬೀರುತ್ತದೆ, ವಿಶೇಷವಾಗಿ ಹೆಣ್ಣುಮಕ್ಕಳ ಬದುಕಿನ ಮೇಲೆ ಕೆಟ್ಟ ಪರಿಣಾಮವನ್ನು ಬೀರುತ್ತದೆ. ಭಾರತದಲ್ಲಿ ಬಾಲ್ಯ ವಿವಾಹವನ್ನು ತಡೆಯುವ ನಿಟ್ಟಿನಲ್ಲಿ ಸ್ವಾತಂತ್ರ್ಯಪೂರ್ವ ಕಾಲದಿಂದಲೂ ಹಲವು ಪ್ರಯತ್ನಗಳು ನಡೆಯುತ್ತಿವೆ. 1844ರಲ್ಲಿ ಮಹಾರಾಷ್ಟ್ರದಲ್ಲಿ ನಡೆದ ರುಕ್ಮಬಾಯಿ ಪ್ರಕರಣ ಮತ್ತು 1860ರಲ್ಲಿ ಬಂಗಾಳದಲ್ಲಿ ನಡೆದ ಫಲೋಮನಿದಾಸ್ ಪ್ರಕರಣಗಳು ಬಾಲ್ಯವಿವಾಹ ವಿರೋಧಿ ಆಂದೋಲನ ಪ್ರಬಲಗೊಳ್ಳಲು, ಕಾನೂನು ರೂಪಿಸಲು ಪ್ರೇರಣೆ ನೀಡಿದವು. 1891ರಲ್ಲಿ ಹುಡುಗಿಯರ ಮದುವೆಯ ಒಪ್ಪಿಗೆಯ ವಯಸ್ಸನ್ನು 12 ವರ್ಷಗಳಿಗೆ ನಿಗದಿಪಡಿಸಿತು. ನಂತರದ ವರ್ಷಗಳಲ್ಲಿ ಪ್ರಬಲಗೊಂಡ ಸಮಾಜ ಸುಧಾರಣಾ ಚಳುವಳಿಯಿಂದಾಗಿ 1929ರಲ್ಲಿ ಮೊದಬಾರಿಗೆ ಬಾಲ್ಯವಿವಾಹ ತಡೆ ಕಾಯ್ದೆಯನ್ನು ಜಾರಿಗೆ ತರಲಾಯಿತು. ಇದನ್ನು 'ಸರ್ದಾ ಕಾಯ್ದೆ' ಎಂದು ಕರೆಯುತ್ತಾರೆ. ಈ ಕಾಯ್ದೆಗೆ 1930, 1938, 1949, 1951, 1968, 1978 ಮತ್ತು 2004 (ಕರ್ನಾಟಕ ತಿದ್ದುಪಡಿ ಕಾಯ್ದೆ – ಬಾಲ್ಯವಿವಾಹ ನಿಷೇಧ ಅಧಿಕಾರಿಗಳನ್ನು ನೇಮಕ ಮಾಡುವುದು) ತಿದ್ದುಪಡಿಗಳನ್ನು ಮಾಡಲಾಗಿದೆ.

ಆದರೆ ಹಿಂದಿನ ಕಾಯ್ದೆಯಲ್ಲಿ ಶಿಕ್ಷೆಯ ಪ್ರಮಾಣ 15 ದಿನಗಳಿಂದ 3 ತಿಂಗಳುಗಳಿದ್ದು, ಬಾಲ್ಯ ವಿವಾಹಗಳನ್ನು ರದ್ದುಪಡಿಸುವ ಮತ್ತು ನಿಯಂತ್ರಿಸುವ ವ್ಯವಸ್ಥೆಗಳನ್ನು ಸೂಚಿಸಿರಲಿಲ್ಲ. ಈ ಎಲ್ಲಾ ಕಾರಣಗಳಿಂದಾಗಿ 2006ರಲ್ಲಿ ಬಾಲ್ಯ ವಿವಾಹ ತಡೆ ಕಾಯ್ದೆ – 1929ನ್ನು ರದ್ದು ಮಾಡಿ ಹೊಸದಾಗಿ ಬಾಲ್ಯ ವಿವಾಹ ನಿಷೇಧ ಕಾಯ್ದೆ – 2006ನ್ನು ಜಾರಿಗೊಳಿಸಲಾಯಿತು. ಈ ಕಾಯ್ದೆಗೆ 2015ರಲ್ಲಿ ನಿಯಮಗಳನ್ನು ಮತ್ತು 2017ರಲ್ಲಿ ತಿದ್ದುಪಡಿಗಳನ್ನು ಕರ್ನಾಟಕದಲ್ಲಿ ಮಾತ್ರ ಜಾರಿಯಾಗುವಂತೆ ಮಾಡಲಾಗಿದೆ.

**ಬಾಲ್ಯ ವಿವಾಹ ನಿಷೇಧ ಕಾಯ್ದೆ–2006ರ ಅನ್ವಯ ಅಪರಾಧಿಗಳು ಯಾರೆಲ್ಲ?**

- ಅಪ್ರಾಪ್ತ ವಯಸ್ಸಿನ ಮಕ್ಕಳನ್ನು ಮದುವೆಯಾಗುವ ಯಾವುದೇ ವಯಸ್ಕ ವ್ಯಕ್ತಿ (ಕಲಂ 9).
- ಬಾಲ್ಯ ವಿವಾಹವನ್ನು ಏರ್ಪಡಿಸುವ, ಪ್ರೇರಣೆ ನೀಡುವ, ನೆರವು ನೀಡುವ, ನೆರವೇರಿಸುವ ಯಾವುದೇ ವ್ಯಕ್ತಿ/ಸಂಸ್ಥೆ (ಕಲಂ 10).
- ಹೆತ್ತವರು, ಪೋಷಕರು, ಮಕ್ಕಳ ಜವಾಬ್ದಾರಿಯನ್ನು ಹೊತ್ತ ಯಾವುದೇ ವ್ಯಕ್ತಿ, ಸಂಸ್ಥೆ, ನಿರ್ಲಕ್ಷ್ಯದಿಂದ ಬಾಲ್ಯ ವಿವಾಹಗಳನ್ನು ತಡೆಯಲು ವಿಫಲರಾದವರಿಗೆ, ಬಾಲ್ಯವಿವಾಹದಲ್ಲಿ ಭಾಗವಹಿಸಿದವರು (ಕಲಂ 11).
- ಕಾಯ್ದೆಯಡಿಯಲ್ಲಿ ನೀಡಿದ ತಡೆಯಾಜ್ಞೆಯನ್ನು ಉಲ್ಲಂಘಿಸಿದವರು (ಕಲಂ 13).

**ಶಿಕ್ಷೆ ಏನು?**

- ಮೇಲಿನ ಎಲ್ಲಾ ಕಲಂಗಳ ಪ್ರಕಾರ ಒಂದು ವರ್ಷದಿಂದ ಎರಡು ವರ್ಷಕ್ಕೆ ವಿಸ್ತರಿಸಬಹುದಾದ ಜೈಲು ವಾಸ ಮತ್ತು 1 ಲಕ್ಷ ರೂಪಾಯಿ ದಂಡ ಅಥವಾ ಈ ಎರಡೂ ಶಿಕ್ಷೆಯನ್ನು ವಿಧಿಸಲಾಗುತ್ತದೆ (ಕರ್ನಾಟಕ ತಿದ್ದುಪಡಿ– ಎಪ್ರಿಲ್ 2017).

**ಯಾರಿಗೆ ದೂರು ಕೊಡಬೇಕು?**

- ಮಕ್ಕಳ ಸಹಾಯವಾಣಿ 1098 ಸಂಖ್ಯೆಗೆ ದೂರವಾಣಿ ಮೂಲಕ ಕರೆಮಾಡಿ (ಉಚಿತ) ಬಾಲ್ಯ ವಿವಾಹ ನಡೆಯುವುದರ ಬಗ್ಗೆ ಮಾಹಿತಿ ನೀಡಬಹುದು.
- ಬಾಲ್ಯ ವಿವಾಹಗಳನ್ನು ತಡೆಗಟ್ಟಲು ಬಾಲ್ಯವಿವಾಹ ನಿಷೇಧ ಅಧಿಕಾರಿಗಳಿಗೆ ದೂರು ನೀಡುವುದು.
- ಪ್ರಕರಣಗಳನ್ನು ದಾಖಲಿಸಲು ಪೊಲೀಸು ಠಾಣೆಗೆ ದೂರು ನೀಡುವುದು.
- ಸಮಾಜ ಸೇವೆಯಲ್ಲಿ ತೊಡಗಿರುವ ವ್ಯಕ್ತಿಗಳು, ಗ್ರಾಮ ಪಂಚಾಯತ್/ಮುನ್ಸಿಪಾಲಿಟಿ, ಯಾವುದೇ ಸರಕಾರಿ ಅಧಿಕಾರಿ, ಯಾವುದೇ ಸರಕಾರಿ ಸ್ವಾಯತ್ತ ಸಂಸ್ಥೆಗಳ ಪ್ರತಿನಿಧಿ, ಸ್ವಯಂ ಸೇವಾ/ಸರಕಾರೇತರ ಸಂಘ ಸಂಸ್ಥೆಗಳ ಪ್ರತಿನಿಧಿಗಳಿಗೂ ಬಾಲ್ಯ ವಿವಾಹ ತಡೆಗಟ್ಟಲು ಮಾಹಿತಿಯನ್ನು ನೀಡಬಹುದು.
- ಪ್ರತಿಯೊಂದು ಜಿಲ್ಲೆಯಲ್ಲಿ ಕಾರ್ಯಾಚರಿಸುತ್ತಿರುವ ಮಕ್ಕಳ ಕಲ್ಯಾಣ ಸಮಿತಿಗೆ.
- ಅಂಗನವಾಡಿ ಕಾರ್ಯಕರ್ತರಿಗೆ.
- ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಅಧಿಕಾರಿಗಳಿಗೆ.

**ಬಾಲ್ಯ ವಿವಾಹ ನಿಷೇಧ ಅಧಿಕಾರಿಗಳ ಕರ್ತವ್ಯಗಳು**

- ಸಾಮೂಹಿಕ ವಿವಾಹ ಆಯೋಜಕರ ಪಟ್ಟಿಯನ್ನು ಇಟ್ಟುಕೊಳ್ಳುವುದು. ಮದುವೆ ನೋಂದಾಯಿಸಿದ ಜೋಡಿಗಳ ದಾಖಲಾತಿಗಳ ಪರಿಶೀಲನೆ ನಡೆಸುವುದು.
- ಕಾನೂನು ಸೇವಾ ಪ್ರಾಧಿಕಾರದಿಂದ ಅಗತ್ಯ ನೆರವು ಒದಗಿಸುವುದು.
- ತಡೆಯಾಜ್ಞೆ, ನಿರ್ವಾಹಣಾ ವೆಚ್ಚ ಮೊದಲಾದ ಆದೇಶಗಳನ್ನು ಕೋರ್ಟಿನಿಂದ ಪಡೆಯುವುದು.
- ಎನ್.ಜಿ.ಒ.ಗಳ ಪಟ್ಟಿಯನ್ನು ತಯಾರಿಸುವುದು.
- ನಿರ್ದೇಶಕರು, ಮಹಿಳೆ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯವರಿಗೆ 3 ತಿಂಗಳಿಗೊಮ್ಮೆ ಬಾಲ್ಯವಿವಾಹ ಪ್ರಕರಣಗಳ ಬಗ್ಗೆ ವರದಿ ನೀಡುವುದು.
- ಸಾಕ್ಷಿಗಳನ್ನು ಸಂಗ್ರಹ ಮಾಡುವುದು.
- ಬಾಲ್ಯ ವಿವಾಹದಿಂದ ಹುಟ್ಟಿದ ಮಗುವಿನ ಪೋಷಣೆ ಬಗ್ಗೆ ನ್ಯಾಯಾಲಯದಿಂದ ಆದೇಶ ಹೊರಡಿಸುವುದು.
- ಮಕ್ಕಳ ಕಲ್ಯಾಣ ಸಮಿತಿಗೆ ಮಾಹಿತಿ ನೀಡಿ ಮಕ್ಕಳಿಗೆ ಸೂಕ್ತ ಪೋಷಣೆ ಮತ್ತು ರಕ್ಷಣೆಯನ್ನು ಒದಗಿಸುವುದು.
- ಬಾಲ್ಯ ವಿವಾಹಗಳನ್ನು ತಡೆಗಟ್ಟುವುದು.
- ಬಾಲ್ಯ ವಿವಾಹ ನಿಷೇಧ ಕಾಯ್ದೆಯ ಬಗ್ಗೆ, ಬಾಲ್ಯ ವಿವಾಹದ ದುಷ್ಪರಿಣಾಮದ ಬಗ್ಗೆ ಜಾಗೃತಿ ಮೂಡಿಸುವುದು.
- ಗ್ರಾಮ ಪಂಚಾಯತ್/ವಾರ್ಡ್ ಮಟ್ಟದಲ್ಲಿ, ತಾಲೂಕು ಮಟ್ಟದಲ್ಲಿ, ಜಿಲ್ಲಾ ಮಟ್ಟದಲ್ಲಿ ಮಕ್ಕಳ ರಕ್ಷಣಾ ಸಮಿತಿಯನ್ನು ರಚಿಸಿ ನಿಯಮಿತವಾಗಿ ಅದನ್ನು ನಡೆಸಿಕೊಂಡು ಹೋಗುವುದು.
- ಮಗುವಿನ, ಕುಟುಂಬದ ಘನತೆ ಕಾಪಾಡುವುದು.
- ಬಾಲ್ಯ ವಿವಾಹ ತಡೆಗಟ್ಟುವುದು ಪ್ರಥಮ ಆದ್ಯತೆಯಾಗಿದ್ದು, ಆದೇಶಗಳಿಗೆ ಬೆಲೆ ನೀಡದೇ ಬಾಲ್ಯ ವಿವಾಹ ನಡೆಸಿದರೆ ಅಂತಹವರ ಮೇಲೆ ಕಾನೂನು ಕ್ರಮ ಕೈಗೊಳ್ಳುವುದು.
- ಬಾಲ್ಯ ವಿವಾಹ ತಡೆಗಟ್ಟಲು ಸ್ಥಳೀಯ ಸಮಾಜ ಸೇವಾ ಕಾರ್ಯಕರ್ತರು, ಜನಪ್ರತಿನಿಧಿಗಳ ಸಹಾಯ ಪಡೆಯುವುದು.
- ಬಾಲ್ಯ ವಿವಾಹಕ್ಕೆ ಬಲಿಯಾದ ಮಕ್ಕಳಿಗೆ ಪುನರ್ವಸತಿ ಕಲ್ಪಿಸುವುದು.

**ಬಾಲ್ಯ ವಿವಾಹ ತಡೆಗಟ್ಟಲು ವಿವಿಧ ಇಲಾಖೆಗಳ ಪಾತ್ರಗಳು (ಕರ್ನಾಟಕ ನಿಯಮದನ್ವಯ)**

- **ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ:** ಬಾಲ್ಯ ವಿವಾಹ ತಡೆಗಟ್ಟಲು ಗ್ರಾಮ ಮಟ್ಟದಿಂದ ಜಿಲ್ಲಾ ಮಟ್ಟದವರೆಗೆ ವಿವಿಧ ದಾಳಿ ತಂಡಗಳನ್ನು ರಚಿಸಿ ನಿರ್ವಹಿಸುವುದು, ಮಕ್ಕಳ ರಕ್ಷಣಾ ಸಮಿತಿಗಳನ್ನು ರಚಿಸುವುದು, ವರದಿಯನ್ನು ತಯಾರಿಸಿ ಸರಕಾರಕ್ಕೆ ಸಲ್ಲಿಸುವುದು, ಸಾಮೂಹಿಕ ಮದುವೆಗಳಲ್ಲಿ ಇಲಾಖೆಯ ಅಧಿಕಾರಿಗಳು ಭಾಗವಹಿಸಿ ದಾಖಲಾತಿಗಳನ್ನು ಪರಿಶೀಲಿಸುವುದು ಇತ್ಯಾದಿ.
- **ಕಂದಾಯ ಇಲಾಖೆ:** ಸಾಮೂಹಿಕ ಮದುವೆ ಆಯೋಜಕರ ನೋಂದಣಿಯನ್ನು ನಿರ್ವಹಿಸುವುದು. ಸಾಮೂಹಿಕ ಮದುವೆಗೆ ಅನುಮತಿಯನ್ನು ತಹಶೀಲ್ದಾರರು ಪರಿಶೀಲಿಸಿ ಕೊಡುವುದು, ಗ್ರಾಮ ಲೆಕ್ಕಾಧಿಕಾರಿಗಳು ಮದುವೆ ನೋಂದಣಿ ಮಾಡುವುದು ಇತ್ಯಾದಿ.
- **ಕಾರ್ಮಿಕ ಇಲಾಖೆ:** ಬಾಲಕಾರ್ಮಿಕ ದಾಳಿ ಸಂದರ್ಭದಲ್ಲಿ ಬಾಲ್ಯ ವಿವಾಹ ಪ್ರಕರಣಗಳ ಬಗ್ಗೆ ಗಮನಿಸುವುದು.
- **ಶಿಕ್ಷಣ ಇಲಾಖೆ:** ಒಂದು ವಾರಕ್ಕಿಂತ ಹೆಚ್ಚು ಗೈರು ಹಾಜರಾದ ಮಕ್ಕಳ ಬಗ್ಗೆ ಗಮನವಹಿಸುವುದು, ಮಕ್ಕಳಲ್ಲಿ ಮತ್ತು ಸಮಾಜದಲ್ಲಿ ಬಾಲ್ಯವಿವಾಹದ ದುಷ್ಪರಿಣಾಮಗಳನ್ನು ತಡೆಗಟ್ಟಲು ಇರುವ ವ್ಯವಸ್ಥೆಗಳ ಬಗ್ಗೆ ಅರಿವು ಮೂಡಿಸುವುದು.
- **ಆರೋಗ್ಯ ಇಲಾಖೆ:** ವ್ಯವಸ್ಥಿತವಾಗಿ ವಯಸ್ಸಿನ ಪ್ರಮಾಣ ಪತ್ರವನ್ನು ನೀಡುವುದು.
- **ಪೊಲೀಸು ಇಲಾಖೆ:** ಬಾಲ್ಯ ವಿವಾಹ ಪ್ರಕರಣಗಳ ಕುರಿತು ಸ್ವಯಂ ಪ್ರೇರಿತವಾಗಿ ಕ್ರಮ ಕೈಗೊಳ್ಳುವುದು, ಪ್ರಥಮ ವರ್ತಮಾನ ವರದಿ ದಾಖಲಿಸುವಾಗ ಸಂಬಂಧಿಸಿದ ಇತರ ಕಾಯ್ದೆಗಳನ್ನು ಅಳವಡಿಸುವುದು.
- **ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ:** ಗ್ರಾಮ ಪಂಚಾಯತ್, ತಾಲೂಕು ಪಂಚಾಯತ್ ಮತ್ತು ಜಿಲ್ಲಾ ಪಂಚಾಯತ್ ಸದಸ್ಯರಲ್ಲಿ ಬಾಲ್ಯವಿವಾಹ ತಡೆಗಟ್ಟುವಲ್ಲಿ ಅವರ ಪಾತ್ರದ ಬಗ್ಗೆ ಅರಿವು ಮೂಡಿಸುವುದು, ಪಂಚಾಯತ್ ಪ್ರದೇಶದಲ್ಲಿ ವ್ಯಾಪಕ ಪ್ರಚಾರ ಕೈಗೊಳುವುದು. ಮಕ್ಕಳ ಗ್ರಾಮಸಭೆಗಳನ್ನು ನಡೆಸಿ ಮಕ್ಕಳ ಸಮಸ್ಯೆಯನ್ನು ನಿವಾರಿಸುವುದು.
- **ಸಮಾಜ ಕಲ್ಯಾಣ, ಹಿಂದುಳಿದ ಮತ್ತು ಅಲ್ಪ ಸಂಖ್ಯಾತರ ಇಲಾಖೆ:** ಹಾಸ್ಟೆಲ್‌ಗಳಲ್ಲಿ ದಾಖಲಾಗಿರುವ ಮಕ್ಕಳ ಗೈರು ಹಾಜರಿ ಬಗ್ಗೆ ಗಮನವಹಿಸುವುದು.

**ಯಾರು ದೂರು ಕೊಡಬಹುದು?**

ಮದುವೆ ನಿಶ್ಚಯವಾದ ಅಪ್ರಾಪ್ತ ವಯಸ್ಸಿನ ಬಾಲಕ ಅಥವಾ ಬಾಲಕಿ, ಸಂಬಂಧಿಕರು, ಸಹಪಾಠಿಗಳು, ನೆರೆಹೊರೆಯವರು, ಶಿಕ್ಷಕರು, ಸ್ವಯಂಸೇವಾ ಸಂಸ್ಥೆಗಳು, ಅಭಿವೃದ್ಧಿ ಕಾರ್ಯಕರ್ತರು, ಸಾರ್ವಜನಿಕರು ಹಾಗೂ ಯಾವುದೇ ನಾಗರಿಕರು.

**ವಯಸ್ಸಿನ ಪ್ರಮಾಣ ಪತ್ರಗಳು:** ಅರ್ಹ ವಯಸ್ಸಿನವರೆಂದು ಸಾಬೀತುಪಡಿಸಲು ಈ ಕೆಳಗಿನ ದಾಖಲಾತಿಗಳು ಮಾತ ಅರ್ಹವಾಗಿರುತ್ತವೆ :

- ಜನನ ಪ್ರಮಾಣ ಪತ್ರ.
- ಶಾಲೆಯಲ್ಲಿ ದಾಖಲಾದಂತೆ ವಯಸ್ಸಿನ ದೃಢೀಕರಣ ಪತ್ರ/ ಎಸ್.ಎಸ್.ಎಲ್.ಸಿ ಅಂಕಪಟ್ಟಿ.
- ಮೇಲಿನ ಎರಡೂ ದಾಖಲಾತಿಗಳು ಇಲ್ಲದಿದ್ದ ಪಕ್ಷದಲ್ಲಿ ವೈದ್ಯಕೀಯ ಪ್ರಮಾಣ ಪತ್ರ (ತಮ್ಮ ಮಗ/ಮಗಳು ಶಾಲೆಗೆ ದಾಖಲಾಗಿಲ್ಲ ಎನ್ನುವ ಪ್ರಮಾಣ ಪತ್ರದೊಂದಿಗೆ ವೈದ್ಯಕೀಯ ಪ್ರಮಾಣ ಪತ್ರಕ್ಕೆ ಅರ್ಜಿ ಸಲ್ಲಿಸಬೇಕು).

**ಬಾಲ್ಯ ವಿವಾಹ ಅಸಿಂಧುವಾಗುವ ಸಂದರ್ಭಗಳು**

- ಕರ್ನಾಟಕದಲ್ಲಿ 2017ರ ಎಪ್ರಿಲ್ ನಂತರ ನಡೆಯುವ ಎಲ್ಲಾ ಬಾಲ್ಯ ವಿವಾಹಗಳು ಅಸಿಂಧು (ಕಾನೂನು ಪ್ರಕಾರ ಮದುವೆಯೇ ಅಲ್ಲ) ಮದುವೆಗಳು.
- ಬಾಲ್ಯ ವಿವಾಹವಾದವರು ಪ್ರಾಪ್ತ ವಯಸ್ಕರಾದ ಮೇಲೆ ಯಾರಾದರೊಬ್ಬರು (ಹುಡುಗಿ ಅಥವಾ ಹುಡುಗ) ಆ ಮದುವೆ ಇಷ್ಟವಿಲ್ಲವಾದಲ್ಲಿ ತಮ್ಮ ಮದುವೆಯನ್ನು ಅಸಿಂಧುಗೊಳಿಸುವಂತೆ ನ್ಯಾಯಾಲಯದಲ್ಲಿ ಮನವಿ ಸಲ್ಲಿಸಿದರೆ.

- ಬಲವಂತದಿಂದ, ಒತ್ತಾಯದಿಂದ ಅಥವಾ ವಂಚನೆಯಿಂದ ಮಾಡಿದ ಮದುವೆ, ಮಾರಾಟದ ಉದ್ದೇಶದಿಂದ ಮದುವೆ ಅಥವಾ ಮದುವೆಯ ಉದ್ದೇಶದಿಂದ ಮಾರಾಟ ಮಾಡಿದರೆ,
- ಕಾನೂನುಬದ್ಧ ಪೋಷಕರ ಬಳಿಯಿಂದ ಬಲವಂತವಾಗಿ ಕರೆದುಕೊಂಡು ಹೋಗಿದ್ದರೆ,
- ಬಾಲ್ಯ ವಿವಾಹಕ್ಕೆ ನ್ಯಾಯಾಲಯವು ತಡೆಯಾಜ್ಞೆ ನೀಡಿದ್ದರೂ, ಅದನ್ನು ಉಲ್ಲಂಘಿಸಿ ಮಾಡಿದ ಬಾಲ್ಯ ವಿವಾಹ

**ಬಾಲ್ಯ ವಿವಾಹವನ್ನು ಅಸಿಂಧುಗೊಳಿಸುವುದು**

ಲಕ್ಷಾಂತರ ಮಕ್ಕಳು ಸಮಾಜದಲ್ಲಿ ಬಾಲ್ಯ ವಿವಾಹಕ್ಕೆ ಒಳಗಾಗಿ ತೊಂದರೆ ಅನುಭವಿಸುತ್ತಿದ್ದಾರೆ. ಕೆಲವರು ಆಗಿರುವ ಬಾಲ್ಯ ವಿವಾಹದಿಂದ ಮುಕ್ತಿಹೊಂದಲು ಬಯಸುತ್ತಾರೆ. ಇಂತಹ ಮಕ್ಕಳಿಗೆ ಕಾಯ್ದೆಯಲ್ಲಿ ಅವಕಾಶವನ್ನು ಕಲ್ಪಿಸಿದ್ದಾರೆ. ಅದುವೇ ಬಾಲ್ಯವಿವಾಹವನ್ನು ಅಸಿಂಧುಗೊಳಿಸುವುದು (ಕಲಂ.3). ವಯಸ್ಕರಿಗೆ ಮದುವೆಯಿಂದ ಬಿಡುಗಡೆ ಹೊಂದಲು, ವಿಚ್ಛೇದನ ಪಡೆಯಲು, ಹಾಗೆಯೇ ಬಾಲ್ಯ ವಿವಾಹದಿಂದ ಹೊರಬರಲು ಅಸಿಂಧುಗೊಳಿಸುವುದು ಸಹಕಾರಿಯಾಗುತ್ತದೆ. ಬಾಲ್ಯ ವಿವಾಹವವನ್ನು ಅಸಿಂಧುಗೊಳಿಸಲು ಬಾಲ್ಯ ವಿವಾಹಕ್ಕೆ ಒಳಗಾದ ಮಕ್ಕಳು ಈ ಕೆಳಗಿನ ದಾಖಲೆಗಳೊಂದಿಗೆ (ಲಭ್ಯವಿದ್ದಲ್ಲಿ) ಹತ್ತಿರದ ಜಿಲ್ಲಾ ನ್ಯಾಯಾಲಯಕ್ಕೆ (ಮದುವೆಯಾದ ಸ್ಥಳ, ಸಂಸಾರ ಮಾಡಿದ ಸ್ಥಳ, ವಾಸವಾಗಿರುವ ವ್ಯಾಪ್ತಿಯ) ಅರ್ಜಿಯನ್ನು ಸಲ್ಲಿಸಬಹುದು.

- ವಯಸ್ಸಿನ ದೃಢೀಕರಣ ಪತ್ರ/ಜನನ ಪ್ರಮಾಣ ಪತ್ರ.
- ಒಂದು ವೇಳೆ ಜನನ ಪ್ರಮಾಣ ಪತ್ರ ಇಲ್ಲದಿದ್ದಲ್ಲಿ ವೈದ್ಯರಿಂದ ಪರೀಕ್ಷೆ ಮಾಡಿಸಿ ಅವರಿಂದ ಪ್ರಮಾಣ ಪತ್ರ ಪಡೆಯಬಹುದು.
- ಮದುವೆಯ ಆಹ್ವಾನ ಪತ್ರಿಕೆ, ಫೋಟೋಗಳು.
- ಬಾಲ್ಯ ವಿವಾಹ ಅಸಿಂಧುಗೊಂಡ ನಂತರ ಬಾಲಕಿಗೆ ಮರು ಮದುವೆಯಾಗುವವರೆಗೆ ಮತ್ತು ಮಗು ಹುಟ್ಟಿದರೆ ಅದರ ಪೋಷಣೆಗೆ ನಿರ್ವಹಣಾ ವೆಚ್ಚವನ್ನು ಗಂಡ/ ಗಂಡನ ಕಡೆಯವರು ನಿರ್ವಹಿಸುವ ಬಗ್ಗೆ ಆದೇಶ ಹೊರಡಿಸುತ್ತದೆ.

**ಸಾಮೂಹಿಕ ವಿವಾಹ ಆಯೋಜಕರು ಕಡ್ಡಾಯವಾಗಿ ಅನುಸರಿಸಬೇಕಾದ ಕ್ರಮಗಳು (ನಿಯಮದಲ್ಲಿ ಸೂಚಿಸಿದಂತೆ)**

- ಸಾಮೂಹಿಕ ವಿವಾಹ ಆಯೋಜನೆ ಮಾಡುವ ಸಂಘ ಸಂಸ್ಥೆಗಳು, ವ್ಯಕ್ತಿಗಳು, ಯಾರೇ ಆದರೂ ನೋಂದಾಯಿತವಾಗಿರಬೇಕು ಮತ್ತು ನವೀಕೃತಗೊಂಡಿರಬೇಕು.
- ಸಾಮೂಹಿಕ ಆಯೋಜನೆಗೆ ಅನುಮತಿ–ಮದುವೆಗೆ ನೋಂದಾಯಿಸಿರುವವರಿಂದ ಪಡೆದಿರುವ ಎಲ್ಲಾ ದಾಖಲೆಗಳೊಂದಿಗೆ(ವಧು ವರರ ಫೋಟೊ, ವಯಸ್ಸಿನ, ವಾಸಸ್ಥಳದ ಅರ್ಜಿ ಇತ್ಯಾದಿ) ಆಯಾ ವ್ಯಾಪ್ತಿಯ ತಹಶೀಲ್ದಾರರಿಂದ ಅನುಮತಿ ಪಡೆಯುವುದು. (100ಕ್ಕಿಂತ ಕಡಿಮೆ ಮದುವೆಯಿದ್ದರೆ ಮದುವೆಗಿಂತ 20 ದಿನ ಒಳಗಾಗಿ, 200 ಜೋಡಿಗಳಿದ್ದರೆ 40 ದಿನದ ಒಳಗಾಗಿ, 200ಕ್ಕಿಂತ ಮೇಲ್ಪಟ್ಟಿದ್ದರೆ 60 ದಿನದ ಒಳಗಾಗಿ).
- ಯಾವುದೇ ಬಾಲ್ಯ ವಿವಾಹಕ್ಕೆ ಅವಕಾಶ ಕೊಡುವಂತಿಲ್ಲ.
- ಸಾಮೂಹಿಕ ಮದುವೆಯಲ್ಲಿ ಭಾಗವಹಿಸುವ ಎಲ್ಲಾ ಜೋಡಿಗಳ ಮದುವೆಯನ್ನು ನೋಂದಾಯಿಸುವುದು.
- ಶಿಶು ಅಭಿವೃದ್ಧಿ ಅಧಿಕಾರಿಗಳಿಗೆ ವರದಿಯನ್ನು ಸಲ್ಲಿಸುವುದು.

**ಗ್ರಾಮ ಮಟ್ಟದಲ್ಲಿ ಯಾವುದೇ ಕುಟುಂಬಗಳು ಬಾಲ್ಯ ವಿವಾಹವನ್ನು ನಡೆಸದಂತೆ ನೋಡಿಕೊಳ್ಳಲು ಇರುವ ವ್ಯವಸ್ಥೆಗಳು**

- ಮಕ್ಕಳ ರಕ್ಷಣಾ ಸಮಿತಿ( ಗ್ರಾಮ ಪಂಚಾಯತ್ ಮಟ್ಟ).
- ಮಹಿಳೆಯರ ಮತ್ತು ಮಕ್ಕಳ ಸಾಗಾಣಿಕೆ ಹಾಗೂ ಮಾರಾಟ ತಡೆ ಸಮಿತಿ (ಗ್ರಾಮ ಪಂಚಾಯತ್ ಮಟ್ಟ).
- ಮಕ್ಕಳ ಗ್ರಾಮ ಸಭೆ (ಗ್ರಾಮ ಪಂಚಾಯತ್ ಮಟ್ಟ).
- ಮಹಿಳಾ ಗ್ರಾಮ ಸಭೆ (ಗ್ರಾಮ ಪಂಚಾಯತ್ ಮಟ್ಟ).
- ಮಕ್ಕಳ ಹಕ್ಕುಗಳ ಕ್ಲಬ್ ( ಶಾಲಾ ಮಟ್ಟ)

- ಬಾಲಿಕಾ/ಕಿಶೋರಿ ಸಂಘ (ಗ್ರಾಮ ಮಟ್ಟ)
- ಗ್ರಾಮ ಆರೋಗ್ಯ, ನೈರ್ಮಲ್ಯ ಮತ್ತು ಮಕ್ಕಳ ರಕ್ಷಣಾ ಸಮಿತಿ (ಗ್ರಾಮ ಮಟ್ಟ)

  (ಈ ಎಲ್ಲಾ ಸಮಿತಿಗಳ ರಚನೆ, ಅನುಷ್ಠಾನದ ಬಗ್ಗೆ ಸರಕಾರದ ಸುತ್ತೋಲೆಗಳು www.makkalahakku.comನಲ್ಲಿ ಲಭ್ಯ)

  ಮೇಲಿನ ಎಲ್ಲಾ ಸಮಿತಿಗಳು ಗ್ರಾಮ ಮತ್ತು ಗ್ರಾಮ ಪಂಚಾಯತ್‌ನಲ್ಲಿ ಇದ್ದಂತೆ ತಾಲ್ಲೂಕು ಮತ್ತು ಜಿಲ್ಲಾ ಮಟ್ಟದಲ್ಲಿಯೂ ಕಾರ್ಯನಿರ್ವಹಿಸುತ್ತವೆ.

**ಮಕ್ಕಳ ರಕ್ಷಣಾ ವ್ಯವಸ್ಥೆಗಳು**

- ಜಿಲ್ಲಾ ಮಕ್ಕಳ ರಕ್ಷಣಾ ಘಟಕ
- ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ
- ಮಕ್ಕಳ ಕಲ್ಯಾಣ ಸಮಿತಿ
- ಬಾಲ ನ್ಯಾಯ ಮಂಡಳಿ
- ಮಕ್ಕಳ ವಿಶೇಷ ಪೊಲೀಸ್ ಘಟಕ
- ಮಕ್ಕಳ ಕಾರ್ಮಿಕ ಯೋಜನಾ ಸಂಘ
- ಮಕ್ಕಳ ಸಹಾಯವಾಣಿ
- ಅರ್ಹ ಸಂಸ್ಥೆಗಳು
- ಸ್ವಯಂ ಸೇವಾ ಸಂಸ್ಥೆಗಳು
- ಗ್ರಾಮ ಮಟ್ಟದಲ್ಲಿರುವ ಎಲ್ಲಾ ಬಾಲ್ಯ ವಿವಾಹ ನಿಷೇಧ ಅಧಿಕಾರಿಗಳು ಹಾಗೂ ಅವರ ಇಲಾಖೆ
- ರಾಜ್ಯ ಮಟ್ಟದ ಬಾಲ್ಯ ವಿವಾಹ ನಿಷೇಧ ಕೋಶ (080 22351098)

**ಸರಕಾರಗಳು ಬಾಲ್ಯವಿವಾಹವನ್ನು ತಡೆಗಟ್ಟುವಲ್ಲಿ ಕೈಗೊಳ್ಳಬೇಕಾದ ಕ್ರಮಗಳು**

- 18 ವರ್ಷಕ್ಕಿಂತಕಡಿಮೆ ವಯಸ್ಸಿನಲ್ಲಿ ಮದುವೆಯಾಗದಂತೆ ಖಚಿತಪಡಿಸುವುದು.
- ವಧು ವರರ ವಯಸ್ಸನ್ನು ಸ್ಪಷ್ಟ ಮತ್ತು ಸೂಕ್ಷ್ಮ ಪರೀಕ್ಷೆಗೆ ಒಳಪಡಿಸುವುದು.
- ಮದುವೆ ನೋಂದಣಿಯನ್ನು ಕಡ್ಡಾಯಗೊಳಿಸುವುದು.
- ಬಲಾತ್ಕಾರದ ಮದುವೆಯನ್ನು ತಡೆಯುವುದು.
- ಬಾಲ್ಯ ವಿವಾಹ ನಿಷೇಧ ಅಧಿಕಾರಿಗಳಿಗೆ ಲಿಂಗ ತಾರತಮ್ಯ, ಮಹಿಳೆಯರ ಮೇಲಿನ ಹಿಂಸೆ, ಬಾಲ್ಯ ವಿವಾಹದ ನಿವಾರಣೆಗೆ ಸಂಬಂಧಿಸಿ ತರಬೇತಿ ನೀಡುವುದು.
- ಕಾನೂನನ್ನು ರಕ್ಷಿಸುವುದು.
- ವೈವಾಹಿಕ ಬಲಾತ್ಕಾರವನ್ನು ಹಿಂಸಾತ್ಮಕ ಅಪರಾಧ ಎಂದು ಪರಿಗಣಿಸುವುದು.
- ಹೆಣ್ಣು ಮಕ್ಕಳ ಶಿಕ್ಷಣಕ್ಕೆ ಪ್ರೋತ್ಸಾಹಿಸುವುದು ಮತ್ತು ಅದಕ್ಕೆ ಬೇಕಾದ ಉತ್ತೇಜನಗಳನ್ನು ಕುಟುಂಬದವರಿಗೆ ಒದಗಿಸುವುದು.
- ಪ್ರಜನನ ಆರೋಗ್ಯ ಸೇವೆಯ ಲಭ್ಯತೆಯನ್ನು ಗ್ರಾಮೀಣ ಮತ್ತು ನಗರದ ಎಲ್ಲಾ ಹುಡುಗಿಯರು ಮತ್ತು ಮಹಿಳೆಯರಿಗೆ ತಲುಪಿಸುವಂತೆ ಹೆಚ್ಚಿಸುವುದು.
- ಮನೆಯಲ್ಲಿ ಆದ ಹೆರಿಗೆಯೂ ಸೇರಿದಂತೆ ಎಲ್ಲಾ ಮಕ್ಕಳ ಜನನ ನೋಂದಣಿಯಾಗುವಂತೆ ಆರೋಗ್ಯ ಕಾರ್ಯಕರ್ತರಿಗೆ ಮತ್ತು ಸಾರ್ವಜನಿಕರಲ್ಲಿ ಜಾಗ್ರತಿ ಮೂಡಿಸುವುದು.
- ಮದುವೆಯಾದ ನಂತರ ಹುಡುಗಿಯರಿಗೆ ಮತ್ತು ಮಹಿಳೆಯರಿಗೆ ನಿರಂತರ ಔಪಚಾರಿಕ ಶಿಕ್ಷಣ ಮತ್ತು ವೃತ್ತಿ ತರಬೇತಿ ಅವಕಾಶಗಳನ್ನು ಒದಗಿಸುವುದು.

**ಬಾಲ್ಯ ವಿವಾಹ ನಿಷೇಧ ಅಧಿಕಾರಿಗಳು**

ಈ ಕೆಳಗೆ ಸೂಚಿಸಿದವರನ್ನು ರಾಜ್ಯ, ಜಿಲ್ಲಾ ಮತ್ತು ತಾಲೂಕು ಮಟ್ಟದ ಬಾಲ್ಯ ವಿವಾಹ ನಿಷೇಧ ಅಧಿಕಾರಿಗಳನ್ನಾಗಿ ರಾಜ್ಯ ಸರಕಾರ ನೇಮಿಸಿದೆ :

| | |
|---|---|
| ರಾಜ್ಯ ಮಟ್ಟದಲ್ಲಿ | ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ<br>ಯೋಜನಾ ನಿರ್ದೇಶಕರು, ಸಮಗ್ರ ಮಕ್ಕಳ ಅಭಿವೃದ್ಧಿ ಯೋಜನೆ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ<br>ಪೊಲೀಸು ಮಹಾ ನಿದೇಶಕರು, ಪೊಲೀಸು ಇಲಾಖೆ<br>ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ<br>ಯೋಜನಾ ನಿರ್ದೇಶಕರು, ಸರ್ವ ಶಿಕ್ಷಣ ಅಭಿಯಾನ<br>ಕಾರ್ಯದರ್ಶಿಗಳು, ಕಂದಾಯ ಇಲಾಖೆ<br>ನಿರ್ದೇಶಕರು (ಪಂಚಾಯತ್‌ರಾಜ್) ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ<br>ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ<br>ಆಯುಕ್ತರು, ಕಾರ್ಮಿಕ ಇಲಾಖೆ<br>ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ<br>ಆಯುಕ್ತರು, ಹಿಂದುಳಿದ ವರ್ಗಗಳ ಅಭಿವೃದ್ಧಿ ಇಲಾಖೆ<br>ನಿರ್ದೇಶಕರು, ಬುಡಕಟ್ಟು ಅಭಿವೃದ್ಧಿ ಇಲಾಖೆ |
| ಜಿಲ್ಲಾ ಮಟ್ಟದಲ್ಲಿ | ಎಲ್ಲಾ ಜಿಲ್ಲಾಧಿಕಾರಿಗಳು<br>ಎಲ್ಲಾ ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ<br>ಎಲ್ಲಾ ಯೋಜನಾಧಿಕಾರಿಗಳು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ<br>ಪೊಲೀಸು ವರಿಷ್ಠಾಧಿಕಾರಿಗಳು ಮಕ್ಕಳ ವಿಶೇಷ ಪೊಲೀಸ್ ಘಟಕ (ಎಸ್.ಜೆ.ಪಿ.ಯು) ದ ಹಿರಿಯ ಶಿಶು ಕಲ್ಯಾಣ ಅಧಿಕಾರಿಗಳು, ಪೊಲೀಸ್ ಇಲಾಖೆ<br>ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ<br>ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್ ಜಿಲ್ಲಾ ಆರೋಗ್ಯ ಅಧಿಕಾರಿಗಳು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ<br>ಉಪ ಕಾರ್ಮಿಕ ಆಯುಕ್ತರು/ಸಹಾಯಕ ಕಾರ್ಮಿಕ ಆಯುಕ್ತರು, ಕಾರ್ಮಿಕ ಇಲಾಖೆ<br>ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು, ಸಮಾಜ ಕಲ್ಯಾಣ ಇಲಾಖೆ<br>ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ ಅಭಿವೃದ್ಧಿ ಇಲಾಖೆ<br>ಐಟಿಡಿಪಿ, ಯೋಜನಾ ಅಭಿವೃದ್ಧಿ ಅಧಿಕಾರಿ, ಬುಡಕಟ್ಟು ಅಭಿವೃದ್ಧಿ ಇಲಾಖೆ<br>ಜಿಲ್ಲಾ ಮಕ್ಕಳ ಸಂರಕ್ಷಣಾಧಿಕಾರಿ–ಐಸಿಪಿಎಸ್, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ |
| ತಾಲೂಕು ಮಟ್ಟದಲ್ಲಿ | ತಹಶೀಲ್ದಾರರು<br>ಕಾರ್ಮಿಕ ಅಧಿಕಾರಿಗಳು, ಕಾರ್ಮಿಕ ಇಲಾಖೆ<br>ಕ್ಷೇತ್ರ ಶಿಕ್ಷಣಾಧಿಕಾರಿಗಳು, ಸಾರ್ವಜನಿಕ ಶಿಕ್ಷಣ ಇಲಾಖೆ<br>ಮಕ್ಕಳ ಅಭಿವೃದ್ಧಿ ಯೋಜನಾ ಅಧಿಕಾರಿಗಳು (ಸಿಡಿಪಿಒ)<br>ಸಂರಕ್ಷಣಾಧಿಕಾರಿಗಳು (ಕೌಟುಂಬಿಕ ದೌರ್ಜನ್ಯ ತಡೆ ಕಾಯ್ದೆ) ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ<br>ಪೊಲೀಸ್ ಸರ್ಕಲ್ ಇನ್ಸ್‌ಪೆಕ್ಟರ್‌ಕಾರ್ಯ ನಿರ್ವಹಣಾಧಿಕಾರಿ, ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ<br>ತಾಲೂಕು ಆರೋಗ್ಯ ಅಧಿಕಾರಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ<br>ತಾಲೂಕು ಸಮಾಜ ಕಲ್ಯಾಣ ಅಧಿಕಾರಿ, ಸಮಾಜ ಕಲ್ಯಾಣ ಇಲಾಖೆ<br>ವಿಸ್ತರಣಾಧಿಕಾರಿ, ಹಿಂದುಳಿದ ವರ್ಗಗಳ ಅಭಿವೃದ್ಧಿ ಇಲಾಖೆ |

| | |
|---|---|
| ಗ್ರಾಮ ಪಂಚಾಯತ್ ಮಟ್ಟದಲ್ಲಿ | ಕಂದಾಯ ನಿರೀಕ್ಷಕರು<br>ಪಂಚಾಯತ್ ಅಭಿವೃದ್ಧಿ ಅಧಿಕಾರಿ, ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ<br>ಸ್ಥಳೀಯ ಪೊಲೀಸ್ ಉಪ ನಿರೀಕ್ಷಕರು |
| ಗ್ರಾಮ ಮಟ್ಟದಲ್ಲಿ | ಮುಖ್ಯ ಶಿಕ್ಷಕರು<br>ಗ್ರಾಮ ಲೆಕ್ಕಾಧಿಕಾರಿಗಳು, ಕಂದಾಯ ಇಲಾಖೆ |
| ನಗರ ಸಭೆ/ ಮಹಾನಗರ ಪಾಲಿಕೆಗಳು | ಕಂದಾಯ ಅಧಿಕಾರಿಗಳು<br>ಮುಖ್ಯ ಶಿಕ್ಷಕರು<br>ಕಂದಾಯ ನಿರೀಕ್ಷಕರು<br>ಆರೋಗ್ಯ ನಿರೀಕ್ಷಕರು<br>ಹಿರಿಯ ಕಾರ್ಮಿಕ ನಿರೀಕ್ಷಕರು<br>ಸ್ಥಳೀಯ ಪೊಲೀಸ್ ನಿರೀಕ್ಷಕರು |

**ಚರ್ಚೆಗೆ ಪ್ರಕರಣಗಳು**

**ಪ್ರಕರಣ–1**

ಬಸಮ್ಮ ಮತ್ತು ವೀರಣ್ಣ ದಂಪತಿಗಳದು ಬಡ ಕುಟುಂಬ. ಮೂರು ಜನ ಹೆಣ್ಣು ಮಕ್ಕಳು. ಕೂಲಿ ಕೆಲಸ ಮಾಡಿ ಜೀವನ ಸಾಗಿಸುತ್ತಿದ್ದರು. ಅವರಲ್ಲಿ ಹಿರಿಯ ಮಗಳು ರತ್ನಳಿಗೆ 14 ವರ್ಷ. 8ನೇ ತರಗತಿಯಲ್ಲಿ ಓದುತ್ತಿದ್ದಳು. ದೊಡ್ಡವಳಾಗಿ 2 ವರ್ಷವಾಗಿತ್ತು. ಅವಳ ಅಪ್ಪ ಅಮ್ಮನಿಗೆ ರತ್ನಳ ಮದುವೆಯದೇ ಚಿಂತೆ. ಆದಷ್ಟು ಬೇಗ ಮದುವೆ ಮಾಡಿಬಿಟ್ಟರೆ ಜವಾಬ್ದಾರಿ ಕಳೆಯುತ್ತದೆ ಎಂದು ಹುಡುಗನ ಹುಡುಕಾಟದಲ್ಲಿದ್ದರು. ಅವರ ಸಂಬಂಧಿಕರಿಗೂ ವಿಷಯ ತಿಳಿಸಿದ್ದರು. ಬಸಮ್ಮನ ತವರು ಮನೆ ಕಡೆಯವರೊಬ್ಬರು ಸಂಬಂಧ ಕುದುರಿಸಿದರು. ಹುಡುಗನಿಗೆ 23 ವರ್ಷ. ಕೃಷಿ ಮಾಡುತ್ತಿದ್ದ. ನಾಲ್ಕು ಎಕರೆ ಜಮೀನು ಇತ್ತು. ಹುಡುಗಿ ನೋಡುವ ಶಾಸ್ತ್ರವೂ ಆಯ್ತು. ಎರಡೂ ಮನೆಯವರಿಗೆ ಇಷ್ಟ ಆಯ್ತು. ಮದುವೆಯ ದಿನವೂ ನಿಗದಿ ಆಯ್ತು. ಲಗ್ನ ಪತ್ರಿಕೆಯೂ ಪ್ರಿಂಟ್ ಆಯ್ತು. ಇನ್ನೇನು ಮದುವೆಗೆ ಕೆಲವು ದಿನಗಳಿರುವಾಗ ಅಂಗನವಾಡಿ ಕಾರ್ಯಕರ್ತೆಗೆ ವಿಷಯ ತಿಳಿದು ಬಸಮ್ಮನ ಮನೆಗೆ ಬಂದು, 18 ವರ್ಷ ತುಂಬದೆ ಮದುವೆ ಮಾಡಬಾರದು. ಈ ಮದುವೆ ನಿಲ್ಲಿಸದಿದ್ದರೆ ನಾನು ಸಂಬಂಧಪಟ್ಟ ಅಧಿಕಾರಿಗಳಿಗೆ ದೂರು ಕೊಡುತ್ತೇನೆ ಎಂದು ಹೇಳಿದರು. ರತ್ನಳ ತಂದೆ ತಾಯಿ ಕಾರ್ಯಕರ್ತೆಯ ಕೈಹಿಡಿದು 'ಹಾಗೆ ಮಾಡಬೇಡಿ. ನಾವು ಬಡವರು ಈಗಾಗಲೇ ಮದುವೆ ಖರ್ಚಿಗೆ ಸಾಲ ಮಾಡಿದ್ದೇವೆ. ಜೊತೆಗೆ ಮದುವೆ ನಿಂತುಹೋದರೆ ಕೆಟ್ಟ ಹೆಸರು ಬರುತ್ತೆ. ಇನ್ನೂ ಇಬ್ಬರು ಮಕ್ಕಳಿದ್ದಾರೆ. ನಿನ್ನ ಕೈಯನ್ನೇ ಕಾಲು ಅಂತ ತಿಳ್ಕೋ' ಎನ್ನುತ್ತಾ ಅಳಲು ಶುರು ಮಾಡಿದರು. ಕಾರ್ಯಕರ್ತೆಗೆ ಏನು ಮಾಡಬೇಕೆಂದೇ ತಿಳಿಯದಾಯಿತು. ವಾಪಸ್ ಬಂದಳು.

1. ಕಾಯಿದೆ ಪ್ರಕಾರ ರತ್ನಾಳ ಮದುವೆ ಪ್ರಕ್ರಿಯೆ ಕಾನೂನುಬದ್ಧವೇ? ಸಂಬಂಧಿತರ ಮೇಲಾಗುವ ಪರಿಣಾಮಗಳೇನು?
2. ಅಂಗನವಾಡಿ ಕಾರ್ಯಕರ್ತೆಯು ಇಂತಹ ಸಂದರ್ಭದಲ್ಲಿ ತೆಗೆದುಕೊಳ್ಳಬೇಕಾದ ಕ್ರಮಗಳೇನು?

**ಪ್ರಕರಣ – 2**

ದಿವ್ಯಾ 17 ವರ್ಷದ ಯುವತಿ. 8ನೇ ತರಗತಿಯಲ್ಲಿ ಓದುತ್ತಿದ್ದಾಗ ಶಾಲೆಗೆ ಹೋಗುವುದನ್ನು ಬಿಟ್ಟಿದ್ದಳು. ತಾಯಿಗೆ ಸಹಾಯ ಮಾಡುತ್ತಾ ಮನೆಯಲ್ಲಿಯೇ ಇದ್ದಳು. ಅವಳ ಅಜ್ಜಿ 'ನಾನು ಸಾಯುವುದರೊಳಗೆ ದಿವ್ಯಾಳ ಮದುವೆ ಮಾಡಿಬಿಡು. ಅವಳಿಗೂ 17 ವರ್ಷ ತುಂಬಿತು' ಅಂತ ಮಗನಿಗೆ ಹೇಳುತ್ತಲೇ ಇದ್ದಳು. ದಿವ್ಯಾಳ ತಾಯಿ ತಂದೆಯರೂ ಮಗಳಿಗೆ ಮದುವೆ ಮಾಡುವ ಆಲೋಚನೆಯಲ್ಲಿದ್ದರು. ಪಕ್ಕದ ಊರಿನ 20ರ ಹರೆಯದ

ರಾಜುವಿನೊಡನೆ ಮದುವೆ ನಿಶ್ಚಯವಾಯಿತು. 10 ತಿಂಗಳು ಕಳೆದ ನಂತರ ಮದುವೆ ಮಾಡುವುದೆಂದು ನಿರ್ಧರಿಸಿದರು. ಏಕೆಂದರೆ ರಾಜುವಿಗೆ 21 ವರ್ಷ ಪೂರ್ಣಗೊಳ್ಳಲು ಎರಡು ತಿಂಗಳು ಬಾಕಿಯಿದ್ದರೆ, ದಿವ್ಯಾಳಿಗೆ 10 ತಿಂಗಳು ಬಾಕಿಯಿತ್ತು. ಆದರೆ ಮದುವೆ ನಿಶ್ಚಯವಾಗಿ ಮೂರು ತಿಂಗಳಾಗಿತ್ತಷ್ಟೇ, ದಿವ್ಯಾಳ ಅಜ್ಜಿಯ ಆರೋಗ್ಯ ಹದಗೆಟ್ಟಿತು. ರಾಜುಗೆ 21 ವರ್ಷ ತುಂಬಿದೆ. ದಿವ್ಯಳಿಗೆ ಇನ್ನು ಕೆಲವು ತಿಂಗಳಿಗೆ 18 ವರ್ಷವಾಗುತ್ತಿತ್ತು. ಯಾರಿಗೆ ತಿಳಿಯುತ್ತದೆ? ಅಜ್ಜಿಯ ಆಸೆ ಪೂರೈಸಿಬಿಡಬೇಕೆಂದು ತರಾತುರಿಯಲ್ಲಿ ಮದುವೆ ದಿನವನ್ನು ನಿರ್ಧರಿಸಿದರು. ಮದುವೆಯ ದಿನವೂ ಬಂತು. ಎಲ್ಲರೂ ಸಂಭ್ರಮಿಸುತ್ತಿದ್ದಾರೆ. ಅದು ಹೇಗೆ ವಿಷಯ ತಿಳಿಯಿತೋ ಪೋಲೀಸಿನವರು ಮಕ್ಕಳ ಅಭಿವೃದ್ಧಿ ಅಧಿಕಾರಿಗಳು ಬಂದುಬಿಟ್ಟರು. ದಿವ್ಯಾಳಿಗೆ ಇನ್ನೂ 18 ವರ್ಷವಾಗಿಲ್ಲದಿರುವುದರಿಂದ ಈ ಮದುವೆ ಮಾಡುವಂತಿಲ್ಲ ಎಂದು ಹೇಳಿ ಮದುವೆ ನಿಲ್ಲಿಸಿಬಿಟ್ಟರು. ದಿವ್ಯಾಳ ತಂದೆ ತಾಯಿಯರಿಂದ ಮುಚ್ಚಳಿಕೆ ಬರೆಸಿಕೊಂಡರು. ಮದುವೆ ನಿಂತುಹೋಯಿತು. ಅದೇ ರಾತ್ರಿ ಯಾರಿಗೂ ತಿಳಿಯದಂತೆ ಎರಡೂ ಮನೆಯವರು ಮಾತನಾಡಿಕೊಂಡು ರಾಜು ಮತ್ತು ದಿವ್ಯಾಳಿಗೆ ಮದುವೆ ಮಾಡಿಬಿಟ್ಟರು. 18 ವರ್ಷವಾಗುವವರೆಗೂ ದಿವ್ಯಾ ತವರು ಮನೆಯಲ್ಲಿರುವುದೆಂದು ತೀರ್ಮಾನಿಸಿದರು.

1. ಈ ಮದುವೆ ಸಿಂಧುವೇ? ಮದುವೆಯಾದ ಮೇಲೆ ದೂರು ಕೊಡುವುದು ಸಾಧ್ಯವೇ?
2. ಒಂದು ವೇಳೆ ರಾಜು ದಿವ್ಯಳನ್ನು ಲೈಂಗಿಕ ಕ್ರಿಯೆಗೆ ಒತ್ತಾಯಿಸಿದರೆ ಅವನ ಮೇಲೆ ದೂರು ಕೊಡಬಹುದೇ?
3. ಬಾಲ್ಯ ವಿವಾಹವಾದವರು ಲೈಂಗಿಕ ಸಂಬಂಧವನ್ನು ಹೊಂದುವ ಬಗ್ಗೆ ನ್ಯಾಯಾಲಯ ಏನು ಹೇಳುತ್ತದೆ?

**ಕರ್ನಾಟಕ ಉಚ್ಚ ನ್ಯಾಯಾಲಯದ ತೀರ್ಪು**

ಕೆಲವು ಧರ್ಮಗಳ ವೈಯಕ್ತಿಕ ಕಾಯ್ದೆಯು ಬಾಲ್ಯ ವಿವಾಹಕ್ಕೆ ಅವಕಾಶ ಮಾಡಿಕೊಡುತ್ತಿದ್ದವು. ಆದರೆ ಅವನ್ನೆಲ್ಲ ರದ್ದುಪಡಿಸಿ ಕರ್ನಾಟಕ ಉಚ್ಚ ನ್ಯಾಯಾಲಯವು ಈ ಕೆಳಗಿನ ತೀರ್ಪನ್ನು ನೀಡಿದೆ–

"ಬಾಲ್ಯ ವಿವಾಹ ನಿಷೇಧ ಕಾಯ್ದೆ, 2006 ಎಲ್ಲಾ ಧರ್ಮಗಳಿಗೂ ಅನ್ವಯಿಸುತ್ತದೆ, ವ್ಯಕ್ತಿಯ ಧರ್ಮದ ಆಧಾರದಲ್ಲಿ ಈ ಕಾಯ್ದೆಯಲ್ಲಿ ಯಾರಿಗೂ ವಿನಾಯತಿ ಇಲ್ಲ. ಬಾಲ್ಯ ತುಂಬಾ ಅಮೂಲ್ಯವಾದದ್ದು. ವಯಸ್ಕನಾದಾಗ ಯಾವುದೇ ವ್ಯಕ್ತಿಗೆ ಮನೆ, ಹೆಂಡತಿ/ಗಂಡ, ಕೆಲಸ, ಆಸ್ತಿ, ಯಾವುದನ್ನಾದರೂ ಕೊಡಬಹುದು. ಆದರೆ ಕಳೆದುಹೋದ ಬಾಲ್ಯವನ್ನು ಮರಳಿ ಕೊಡಲಾಗುವುದಿಲ್ಲ. ಬಾಲ್ಯವನ್ನು ಸಂಪೂರ್ಣವಾಗಿ ಅನುಭವಿಸಲು ಆ ಮಗು ವಯಸ್ಸಿಗೆ ಬಂದು ಮದುವೆಯ ಬಂಧನಕ್ಕೆ ಒಳಗಾಗುವ ಮೊದಲು ಬಿಡಬೇಕು" (ರಿಟ್ ಮೊಕದ್ದಮೆ ಸಂ.75889 (ಜಿ.ಎಂ–ಆರ್.ಇ.ಎಸ್)

**ಸರ್ವೋಚ್ಚ ನ್ಯಾಯಾಲಯದ ತೀರ್ಪು**

ಭಾರತೀಯ ದಂಡ ಸಂಹಿತೆಯ ಕಲಂ 375ರಲ್ಲಿ 15 ರಿಂದ 18 ವರ್ಷದೊಳಗಿನ ಪತ್ನಿಯೊಂದಿಗೆ ಗಂಡ ನಡೆಸುವ ಲೈಂಗಿಕ ಕ್ರಿಯೆಯನ್ನು ಅಪರಾಧವೆಂದು ಪರಿಗಣಿಸಿರುವುದಿಲ್ಲ. ಇದರಿಂದಾಗಿ ಲಕ್ಷಾಂತರ ಮಕ್ಕಳು ಗಂಡನಿಂದಲೇ ಪ್ರತಿ ದಿನ ಅತ್ಯಾಚಾರಕ್ಕೆ ಒಳಗಾದರೂ ಅದು ಅಪರಾಧವಾಗಿರಲಿಲ್ಲ. ಆದರೆ ಇತ್ತೀಚೆಗೆ ಭಾರತದ ಸರ್ವೋಚ್ಚ ನ್ಯಾಯಾಲಯವು, "15 ರಿಂದ 18 ವರ್ಷದೊಳಗಿನ ಹೆಣ್ಣು ಮಕ್ಕಳೊಂದಿಗೆ ನಡೆಸುವ ಎಲ್ಲಾ ಲೈಂಗಿಕ ಸಂಬಂಧವನ್ನು ಅತ್ಯಾಚಾರವೆಂದು ಪರಿಗಣಿಸಲಾಗುತ್ತದೆ" ಎಂದು ತೀರ್ಪು ನೀಡಿದೆ (15 ರಿಂದ 18 ವರ್ಷದೊಳಗಿನ ಮದುವೆಯಾದ ಹೆಂಡತಿಯೊಂದಿಗೆ ಲೈಂಗಿಕ ಸಂಬಂಧವು ಅತ್ಯಾಚಾರವಾಗುತ್ತದೆ ಮತ್ತು ಕಲಂ 376 ರನ್ವಯ ಅಪರಾಧವಾಗುತ್ತದೆ–ರಿಟ್ ಸಂಖ್ಯೆ; ಡಬ್ಲ್ಯೂ.ಪ(ಸಿ) 382, 2013 ದಿನಾಂಕ 11.09.2017).

**ಮೌಲ್ಯಮಾಪನ**

1. 20 ವರ್ಷದ ಹೆಣ್ಣು 18 ವರ್ಷದ ಗಂಡನ್ನು ಮದುವೆಯಾದರೆ ಅದು ಬಾಲ್ಯವಿವಾಹ. (ಸರಿ)
2. ಕರ್ನಾಟಕ ರಾಜ್ಯವು 2006ರ ಬಾಲ್ಯ ವಿವಾಹ ನಿಷೇಧ ಕಾಯ್ದೆಗೆ ತಿದ್ದುಪಡಿಯನ್ನು ತಂದಿದೆ. (ಸರಿ)
3. ಬಾಲ್ಯ ವಿವಾಹವನ್ನು ನೆರವೇರಿಸಿದವರಿಗೆ ಎರಡು ವರ್ಷಗಳವರೆಗೆ ವಿಸ್ತರಿಸಬಹುದಾದ ಶಿಕ್ಷೆಯಿದೆ. (ಸರಿ)
4. ಬಾಲ್ಯ ವಿವಾಹಗಳನ್ನು ತಡೆಗಟ್ಟಲು ಬಾಲ್ಯ ವಿವಾಹ ನಿಷೇಧ ಅಧಿಕಾರಿಗಳನ್ನು ನೇಮಿಸಲಾಗಿದೆ. (ಸರಿ)
5. ಸ್ವಯಂ ಸೇವಾ ಸಂಸ್ಥೆಗಳ ಪ್ರತಿನಿಧಿಗಳು ಬಾಲ್ಯ ವಿವಾಹವನ್ನು ತಡೆಗಟ್ಟಲು ನಿಷೇಧಾಧಿಕಾರಿಗಳಿಗೆ ಮಾಹಿತಿ ನೀಡಬೇಕು. (ಸರಿ)
6. ಸಾಕ್ಷಿಗಳ ಸಂಗ್ರಹ ಬಾಲ್ಯ ವಿವಾಹ ನಿಷೇಧಾಧಿಕಾರಿಗಳ ಕರ್ತವ್ಯವಾಗಿರುತ್ತದೆ.(ಸರಿ)
7. ಪೊಲೀಸ್ ಅಧಿಕಾರಿ ತನ್ನ ಕಾರ್ಯಕ್ಷೇತ್ರದಲ್ಲಿ ಬಾಲ್ಯ ವಿವಾಹ ನಡೆದಲ್ಲಿ ಸ್ವಯಂ ಪೇರಿತರಾಗಿ ದೂರು ದಾಖಲಿಸಿಕೊಳ್ಳಬಹುದು. (ಸರಿ)
8. ಬಾಲ್ಯ ವಿವಾಹವನ್ನು ಜಿಲ್ಲಾ ನ್ಯಾಯಾಲಯದಲ್ಲಿ ಅಸಿಂಧುಗೊಳಿಸಬಹುದು. (ಸರಿ)
9. ಗ್ರಾಮಪಂಚಾಯತ್ ಮಟ್ಟದಲ್ಲಿ ಪಂಚಾಯತ್ ಅಭಿವೃದ್ಧಿ ಅಧಿಕಾರಿ, ಮುಖ್ಯ ಶಿಕ್ಷಕರು, ಗ್ರಾಮ ಲೆಕ್ಕಾಧಿಕಾರಿ ಬಾಲ್ಯ ವಿವಾಹ ನಿಷೇಧ ಅಧಿಕಾರಿಯಾಗಿರುತ್ತಾರೆ. (ಸರಿ)
10. ಬಾಲ್ಯ ವಿವಾಹ ನಿಷೇಧ ಕಾಯ್ದೆ – 2006 ಎಲ್ಲಾ ಧರ್ಮದವರಿಗೆ ಅನ್ವಯಿಸುತ್ತದೆ. (ಸರಿ)

# ವಿವಾಹ ಕಾಯ್ದೆಗಳು

**ಪ್ರಸ್ತಾವನೆ**

ಮದುವೆಗೆ ಸಂಬಂಧಿಸಿದಂತೆ ಬೇರೆ ಬೇರೆ ಧರ್ಮದವರಿಗೆ ಬೇರೆ ಬೇರೆ ಕಾನೂನುಗಳಿವೆ. ಇದನ್ನು ವೈಯಕ್ತಿಕ ಕಾನೂನುಗಳೆಂದು ಕರೆಯುತ್ತಾರೆ. ಹಾಗೆಯೇ ಎಲ್ಲಾ ಧರ್ಮದವರು ಅನುಸರಿಸಬಹುದಾದ ಕಾನೂನು ಸಹ ಅಸ್ತಿತ್ವದಲ್ಲಿದೆ.

ನಮ್ಮ ದೇಶದಲ್ಲಿ ಎರಡು ರೀತಿಯಲ್ಲಿ ಮದುವೆಯಾಗಲು ಅವಕಾಶವಿದೆ.

**1 ಸಾಂಪ್ರದಾಯಿಕ ವಿವಾಹ** : ಭಾರತದಲ್ಲಿ ಹಿಂದೂ, ಮುಸ್ಲಿಂ, ಕ್ರಿಶ್ಚಿಯನ್, ಪಾರ್ಸಿ ಹೀಗೆ ಬೇರೆ ಬೇರೆ ಧರ್ಮದ ಜನರಿಗೆ ಬೇರೆ ಬೇರೆ ಕಾನೂನುಗಳಿವೆ. ಧಾರ್ಮಿಕ ಸಂಪ್ರದಾಯದ ಪ್ರಕಾರ ಮದುವೆಯಾಗುವವರಿಗೆ ಆಯಾ ಧರ್ಮದ ಕಾನೂನುಗಳು ಅನ್ವಯವಾಗುತ್ತದೆ.

**2 ನೋಂದಣಿ ವಿವಾಹ:** 'ವಿಶೇಷ ವಿವಾಹ ಅಧಿನಿಯಮ'ದ ಪ್ರಕಾರ ಯಾವುದೇ ಜಾತಿ, ಜನಾಂಗ, ಧರ್ಮಗಳ ಮಹಿಳೆ ಮತ್ತು ಪುರುಷರು ನೋಂದಣಿ ಮೂಲಕ ಮಾಡಿಕೊಳ್ಳುವ ಮದುವೆಯನ್ನು ನೋಂದಣಿ ವಿವಾಹ, ಜಾತ್ಯತೀತ ಮದುವೆ, ರಿಜಿಸ್ಟರ್ ಮದುವೆ ಎಂದೆಲ್ಲ ಕರೆಯುತ್ತಾರೆ.

**ಸಾಂಪ್ರದಾಯಿಕ ವಿವಾಹ**

**ಹಿಂದೂ ವಿವಾಹ – ಷರತ್ತುಗಳು**

- ಮದುವೆಯಾಗುವ ಮಹಿಳೆ ಮತ್ತು ಪುರುಷ ಇಬ್ಬರೂ ಹಿಂದೂಗಳಾಗಿರಬೇಕು. ಇಬ್ಬರೂ ಒಂದೇ ಜಾತಿಯವರಾದರೆ ಆಯಾ ಜಾತಿಯ ಪದ್ಧತಿ, ಸಂಪ್ರದಾಯದ ಪ್ರಕಾರ ಮದುವೆಯಾಗಬೇಕು .
- ವರನಿಗೆ 21 ವರ್ಷ ಹಾಗೂ ವಧುವಿಗೆ 18 ವರ್ಷ ತುಂಬಿರಬೇಕು.
- ಮದುವೆಯಾಗುವ ವ್ಯಕ್ತಿಗೆ (ಮಹಿಳೆ ಅಥವಾ ಪುರುಷ) ಈ ಮೊದಲೇ ಜೀವಂತ ಇರುವ ಪತಿ/ ಪತ್ನಿ ಇರಬಾರದು. ಅಕಸ್ಮಾತ್ ಎರಡನೇ ಬಾರಿ ಮದುವೆಯಾಗಬೇಕಾದರೆ ಮೊದಲ ಪತಿ/ ಪತ್ನಿಯಿಂದ ವಿಚ್ಛೇದನವನ್ನು ಪಡೆದಿರಬೇಕು ಅಥವಾ ಆ ವ್ಯಕ್ತಿಗಳು ಮರಣ ಹೊಂದಿರಬೇಕು.
- ಗುಣಪಡಿಸಲಾಗದ ಮಾನಸಿಕ ಅಸ್ವಸ್ಥತೆಯಿಂದಾಗಿ ವಿವಾಹಕ್ಕೆ ಸಮ್ಮತಿ ನೀಡಲು ಅಸಮರ್ಥರಾಗಿರಬಾರದು.
- ನಪುಂಸಕರಾಗಿರಬಾರದು, ಲೈಂಗಿಕ ಬದುಕನ್ನು ನಡೆಸುವ ಸಾಮರ್ಥ್ಯವಿರಬೇಕು. ಆದರೆ ಮಕ್ಕಳಾಗದಿರುವುದು ನಪುಂಸಕತ್ವವಲ್ಲ.
- ರಕ್ತ ಸಂಬಂಧಿಗಳು ಮದುವೆಯಾಗಬಾರದು. ಆದರೆ ನಮ್ಮ ಸಮಾಜದಲ್ಲಿ ಪುರುಷರು ಅಕ್ಕನ ಮಗಳನ್ನು, ಸೋದರ ಮಾವನನ್ನು/ಅತ್ತೆಯ ಮಗಳನ್ನು ಮದುವೆಯಾಗುವ ಪದ್ಧತಿಯಿದೆ. ಅದು ಆಯಾ ಜಾತಿ/ಪಂಗಡಗಳ ಸಂಪ್ರದಾಯವಾಗಿದ್ದಲ್ಲಿ ಕಾನೂನು ಸಮ್ಮತಿಯಿರುತ್ತದೆ. (ರಕ್ತ ಸಂಬಂಧಿಗಳು ಮದುವೆಯಾಗಬಾರದು) ಎನ್ನುವುದಕ್ಕೆ ವೈಜ್ಞಾನಿಕ ಕಾರಣಗಳಿವೆ. ಯಾವುದೇ ತಲೆಮಾರಿನಲ್ಲಿ, ಆ ಕುಟುಂಬದಲ್ಲಿ ವಂಶಪಾರಂಪರ್ಯವಾಗಿ ಬರುವ ಕಾಯಿಲೆಗಳಿದ್ದಲ್ಲಿ ಅದು ಮಕ್ಕಳಿಗೂ ಬರಬಹುದು. ಆದ್ದರಿಂದ ರಕ್ತ ಸಂಬಂಧಿಗಳಲ್ಲದವರನ್ನು ಮದುವೆಯಾಗುವುದು ಆರೋಗ್ಯದ ದೃಷ್ಟಿಯಿಂದ ಒಳ್ಳೆಯದು.

**ವಿವಾಹದ ಕ್ರಮ ಬದ್ಧತೆ**

- ಹಿಂದೂ ವಿವಾಹ ಕಾರ್ಯದಲ್ಲಿ ಮೂರು ಹಂತಗಳಿವೆ. 1. ನಿಶ್ಚಿತಾರ್ಥ 2. ಅಗ್ನಿಯ ಮುಂದೆ ಮಾಡಲಾಗುವ ಮಂತ್ರೋಚ್ಚಾರಣೆ 3. ಸಪ್ತಪದಿ.
- ನಿಶ್ಚಿತಾರ್ಥವು ವಿವಾಹದ ಬಗೆಗಿನ ವಾಗ್ದಾನವಾಗಿದ್ದು ಅದನ್ನು ಮುರಿಯಬಹುದು.
- ಅಗ್ನಿಯ ಮುಂದೆ ಮಂತ್ರೋಚ್ಚಾರಣೆ ಮಾಡಿ ಕನ್ಯಾದಾನ ಮಾಡುವುದು ಕೂಡಾ ವಿವಾಹ ಎಂದೆನಿಸಿಕೊಳ್ಳುವುದಿಲ್ಲ.
- ವಧು ವರರಿಬ್ಬರೂ ಜತೆಯಾಗಿ ಪವಿತ್ರ ಅಗ್ನಿಯ ಸುತ್ತ ಏಳು ಹೆಜ್ಜೆಗಳನ್ನು ಇಡುವ 'ಸಪ್ತ ಪದಿ' ಮುಗಿದ ಮೇಲಷ್ಟೇ ವಿವಾಹ ಕಾರ್ಯವು ಮುಗಿಯುವುದು ಎಂದು ಹೇಳಬಹುದು. ಪಾಣಿಗ್ರಹಣ ಮತ್ತು ಸಪ್ತಪದಿ ಇವು ವಿವಾಹದ ಮೂಲಾಧಾರಗಳು.

**ಸಪ್ತಪದಿ ಹೊರತಾಗಿನ ವಿವಾಹವು ಅಸಿಂಧುವೆಂದಾಗಲೀ ಅಥವಾ ವಿವಾಹವು ಸಿಂಧುವಾಗಲು ಸಪ್ತಪದಿ ಅವಶ್ಯವೆಂದಾಗಲೀ ಅಲ್ಲ.**

**ಮುಸ್ಲಿಂ ವಿವಾಹ**

- ಮದುವೆಯಾಗುವವರಿಬ್ಬರೂ ಮುಸ್ಲಿಂ ಧರ್ಮಕ್ಕೆ ಸೇರಿದವರಾಗಿರಬೇಕು. ಆದರೆ ಮುಸ್ಲಿಂ ಪುರುಷ 'ಕಿತಾಬಿಯಾ', ಅಂದರೆ ಪವಿತ್ರ ಗ್ರಂಥವನ್ನು ಪೂಜಿಸುವ ಸಮುದಾಯಕ್ಕೆ ಸೇರಿದ ಮಹಿಳೆಯನ್ನು (ಕ್ರಿಶ್ಚಿಯನ್) ಮದುವೆಯಾಗಬಹುದು.
- ಹುಡುಗ– ಹುಡುಗಿ ಇಬ್ಬರೂ ಪ್ರೌಢಾವಸ್ಥೆಯನ್ನು ತಲುಪಿರಬೇಕು. ಅಂದರೆ ಕನಿಷ್ಠ 15 ವರ್ಷ ತುಂಬಿರಬೇಕು. (ಈಗ ಕನಿಷ್ಠ 18 ವರ್ಷ ತುಂಬಿರಬೇಕು.)
- ಮದುವೆಯಾಗುವವರು ಮಾನಸಿಕ ಸ್ವಾಸ್ಥ್ಯವನ್ನು ಹೊಂದಿರಬೇಕು.
- ಮದುವೆಯಾಗುವ ಪುರುಷ ಮತ್ತು ಮಹಿಳೆ ಇಬ್ಬರದೂ ಒಪ್ಪಿಗೆಯಿರಬೇಕು. ಪುರುಷ / ಮಹಿಳೆ ತಮಗೆ ಮದುವೆ ಇಷ್ಟವಿಲ್ಲದಿದ್ದರೆ, 'ಒಪ್ಪಿಗೆಯಿಲ್ಲ' ಎಂದು ಹೇಳುವ ಅವಕಾಶವಿದೆ.
- ಪುರುಷ ಮತ್ತು ಮಹಿಳೆ ನಿಷೇಧಿತ ಸಂಬಂಧಿಗಳಾಗಿದ್ದರೆ ಮದುವೆಯಾಗುವಂತಿಲ್ಲ. ನಿಷೇಧಿತ ಸಂಬಂಧಿಗಳು ಎಂದರೆ ತಾಯಿ ಅಥವಾ ಅಜ್ಜಿ, ಮಗಳು/ ಮೊಮ್ಮಗಳು, ಸೋದರ ಸೊಸೆ ಅಥವಾ ಅವಳ ಮಗಳು, ಸೋದರತ್ತೆ, ಸೋದರಿ, ತಾಯಿಯ ಸಹೋದರಿ ಹಾಗೂ ಹೆಂಡತಿಯ ತಂಗಿ ಅಕ್ಕ ಇವರಲ್ಲಿ ಯಾರನ್ನೂ ಮದುವೆಯಾಗುವಂತಿಲ್ಲ.
- ವಿವಾಹ ಒಪ್ಪಂದದ ಗೌರವಾರ್ಥ ಸಲುವಾಗಿ ವರನು ವಧುವಿಗೆ ಮೆಹರ್ ನೀಡಬೇಕು. ವಧುವಿನ ಆರ್ಥಿಕ ಭದ್ರತೆಗಾಗಿ ಒಂದು ನಿರ್ದಿಷ್ಟ ಮೊತ್ತ ಅಥವಾ ಯಾವುದೇ ಮೌಲ್ಯವಿರುವ ವಸ್ತುವನ್ನು ನೀಡುವುದೇ ಮೆಹರ್ ಎನ್ನುತ್ತಾರೆ. ಈ ಪದ್ಧತಿಯು ಮುಸ್ಲಿಂ ವಿವಾಹದಲ್ಲಿ ಕಡ್ಡಾಯವಾಗಿರುತ್ತದೆ.
- ಮುಸ್ಲಿಂ ಕಾನೂನಿನ ಪ್ರಕಾರ ಮುಸ್ಲಿಂ ಪುರುಷರಿಗೆ ಬಹುಪತ್ನಿತ್ವದ ಅಧಿಕಾರವನ್ನು ನೀಡಿದೆ. ಇದರ ಅನ್ವಯ ಒಬ್ಬ ಮುಸ್ಲಿಂ ಪುರುಷನು ಏಕಕಾಲದಲ್ಲಿ ನಾಲ್ಕು ಪತ್ನಿಯರನ್ನು ಹೊಂದಿರಬಹುದು. ಆದರೆ ಆತನು ಅವರೊಂದಿಗೆ ಸಮಾನತೆ ಮತ್ತು ನ್ಯಾಯ ಸಮ್ಮತವಾಗಿ ವರ್ತಿಸಬೇಕಾಗುತ್ತದೆ.
- ಮುಸ್ಲಿಂ ಪದ್ಧತಿಯ ಪ್ರಕಾರ ಪತಿಯು ತನ್ನ ಪತ್ನಿಗೆ 3 ಬಾರಿ ತಲಾಖ್ ತಲಾಖ್ ತಲಾಖ್ (ತ್ರಿವಳಿ ತಲಾಖ್) ಎಂದು ಹೇಳಿದರೆ ಅದು ವಿವಾಹ ವಿಚ್ಛೇಧನ ಎಂದು ಪರಿಗಣಿಸಲಾಗುತ್ತಿತ್ತು. ಆದರೆ ಇತ್ತೀಚಿಗೆ ತಲಾಖ್ ಕಾಯ್ದೆಯು ಜಾರಿಗೊಂಡಿದ್ದು(2019) ತ್ರಿವಳಿ ತಲಾಖ್ ಅಪರಾಧ ಎಂದು ಘೋಷಿಸಿದೆ. ಈ ಮಸೂದೆಯ ಅನ್ವಯ ಮುಸ್ಲಿಂ ಪತಿಯು ತನ್ನ ಪತ್ನಿಗೆ ತಲಾಖ್ ನೀಡಿದರೆ 3 ವರ್ಷ ಜೈಲು ಶಿಕ್ಷೆಗೆ ಬಾಧ್ಯಸ್ಥನಾಗುತ್ತಾನೆ, ಅಲ್ಲದೆ ಪತ್ನಿ ಮತ್ತು ಮಕ್ಕಳಿಗೆ ಜೀವನಾಂಶವನ್ನು ನೀಡಬೇಕಾಗುತ್ತದೆ.

**ವಿವಾಹದ ಕ್ರಮ ಬದ್ಧತೆ**

- ಉಭಯ ಪಕ್ಷಗಳವರಲ್ಲಿ ಒಬ್ಬರು ವಿವಾಹದ ಪ್ರಸ್ತಾಪ ಮಾಡಬೇಕು ಮತ್ತು ಅದನ್ನು ಮತ್ತೊಬ್ಬರು ಅಂಗೀಕರಿಸಬೇಕು. ಇದನ್ನು ನಿಕಾಃ ಎಂದು ಕರೆಯಲಾಗುತ್ತದೆ.
- ಪ್ರಸ್ತಾಪ ಮತ್ತು ಅಂಗೀಕಾರ ಬರಹದಲ್ಲಿದ್ದರೆ ಅದನ್ನು ನಿಕಾಃನಾಮಾ ಎಂದು ಕರೆಯುತ್ತಾರೆ. ಅದಕ್ಕೆ ವಧು ವರರು ಸಹಿ ಮಾಡಬೇಕು. ಮೌಖಿಕವಾಗಿಯೂ ಇರಬಹುದು.
- ಪ್ರಸ್ತಾಪ ಮತ್ತು ಅಂಗೀಕಾರ ಯಾವುದೇ ಷರತ್ತಿಗೆ ಒಳಪಟ್ಟಿರಬಾರದು.
- ಪ್ರಸ್ತಾಪ ಮತ್ತು ಅಂಗೀಕಾರ ಎರಡೂ ಏಕ ಕಾಲದಲ್ಲಿ ಮತ್ತು ಇಬ್ಬರು ಮುಸ್ಲಿಂ ಪುರುಷ ಮತ್ತು ಇಬ್ಬರು ಸ್ತ್ರೀ ಸಾಕ್ಷಿಗಳ ಸಮಕ್ಷಮ ಜರುಗಬೇಕು.
- ಮುಸ್ಲಿಂ ವಿವಾಹವನ್ನು ಮೌಲ್ವಿಯವರೇ ನಡೆಸಿಕೊಡಬೇಕು.
- ಮೌಲ್ವಿಯು ವಿವಾಹ ಸಂಬಂಧ ಒಂದು ರಿಜಿಸ್ಟರನ್ನು ಹೊಂದಿದ್ದು ಅದರಲ್ಲಿ ವಧು ವರ ಮತ್ತು ಸಾಕ್ಷಿದಾರರು ಸಹಿ ಮಾಡಬೇಕು.
- ವಿವಾಹ ಸಂಬಂಧ ಯಾವುದೇ ಧಾರ್ಮಿಕ ವಿಧಿಯೂ ಕಡ್ಡಾಯವಲ್ಲ.

## ಕ್ರೈಸ್ತ ವಿವಾಹ

**ಕ್ರೈಸ್ತ ಧರ್ಮದ ಕ್ಯಾಥೋಲಿಕ್, ಪ್ರಾಟೆಸ್ಟಂಟ್ ಮತ್ತಿತರ ಎಲ್ಲಾ ಪಂಗಡದವರಿಗೂ ಈ ಕಾನೂನು ಅನ್ವಯವಾಗುತ್ತದೆ.**

- ಮದುವೆಯಾಗುವ ಗಂಡಿಗೆ 21 ವರ್ಷ ಹಾಗೂ ಹೆಣ್ಣಿಗೆ 18 ವರ್ಷ ತುಂಬಿರಬೇಕು.
- ಇಬ್ಬರೂ ಕ್ರಿಶ್ಚಿಯನ್ ಅಥವಾ ಇಬ್ಬರಲ್ಲಿ ಯಾರಾದರೂ ಒಬ್ಬರು ಕ್ರಿಶ್ಚಿಯನ್ನರಾಗಿರಬೇಕು.
- ಗಂಡು ಮತ್ತು ಹೆಣ್ಣು ಇಬ್ಬರೂ ಮಾನಸಿಕ ಸ್ವಾಸ್ಥ್ಯ ಹೊಂದಿರಬೇಕು.
- ಇಬ್ಬರಿಗೂ ಈಗಾಗಲೇ ಮದುವೆಯಾಗಿದ್ದು ಜೀವಂತ ಸಂಗಾತಿ ಇರಬಾರದು. (ಮೊದಲ ಗಂಡ ಅಥವಾ ಹೆಂಡತಿ ತೀರಿಕೊಂಡಿದ್ದರೆ, ವಿಚ್ಛೇದನ ಪಡೆದಿದ್ದರೆ ಮರು ಮದುವೆಯಾಗಬಹುದು).
- ಚರ್ಚಿನಲ್ಲಿ ಮದುವೆಯನ್ನು ಅಸಿಂಧು ಎಂದು ಘೋಷಿಸಿದ್ದರೂ, ಮರು ಮದುವೆಯಾಗಬೇಕಾದರೆ ನ್ಯಾಯಾಲಯದಲ್ಲಿ ಅರ್ಜಿಸಲ್ಲಿಸಿ ವಿಚ್ಛೇದನ ಪಡೆದುಕೊಳ್ಳಬೇಕು.
- ಕ್ರಿಶ್ಚಿಯನ್ನರು ಚರ್ಚುಗಳಲ್ಲಿಯೇ ಮದುವೆಯಾಗಬೇಕು. ಬೆಳಿಗ್ಗೆ 6 ಗಂಟೆಯಿಂದ ಸಂಜೆ 7 ಗಂಟೆಯ ಒಳಗೆ ಮದುವೆ ನಡೆಯಬೇಕು. ಬೇರೆ ಸಮಯದಲ್ಲಿ ನಡೆಯಬೇಕಾದಲ್ಲಿ ಅದಕ್ಕಾಗಿ ವಿಶೇಷ ಪರವಾನಿಗೆಯನ್ನು ಪಡೆಯಬೇಕು.

## ವಿವಾಹದ ಕ್ರಮ ಬದ್ಧತೆ

- ಚರ್ಚಿನ ಪಾದ್ರಿಯೇ ಮದುವೆಯನ್ನು ನಡೆಸಿಕೊಡಬೇಕು. ಉಂಗುರಗಳನ್ನು ಬದಲಾಯಿಸಿಕೊಳ್ಳುವುದನ್ನು ಬಿಟ್ಟು ಬೇರೆ ಯಾವ ಪದ್ಧತಿ ಆಚರಣೆಗಳೂ (ಕರಿಮಣಿ, ತಾಳಿ ಕಟ್ಟುವುದು ಇತ್ಯಾದಿ) ಕ್ರಿಶ್ಚಿಯನ್ ಕಾನೂನಿನಲ್ಲಿಲ್ಲ. ಮದುವೆಯಾಗುವವರ ಹೆಸರುಗಳನ್ನು ಚರ್ಚಿನಲ್ಲಿ ನೋಂದಾಯಿಸಿಕೊಳ್ಳಬೇಕು. ನಂತರ ಮೂರು ಭಾನುವಾರ ಪಾದ್ರಿಯವರು ಪ್ರಾರ್ಥನಾ ಸಭೆಯಲ್ಲಿ ಅದನ್ನು ಓದಬೇಕು. ಆ ಮದುವೆಗೆ ಯಾರದಾದರೂ ಅಕ್ಷೇಪಗಳಿದ್ದಲ್ಲಿ ಚರ್ಚಿನಲ್ಲಿ ಹೇಳಬಹುದು.
- ಮದುವೆಯ ನಂರತ ಚರ್ಚಿನಲ್ಲಿರುವ ಪ್ರತ್ಯೇಕ ವಿವಾಹ ನೋಂದಣಿ ಪುಸ್ತಕದಲ್ಲಿ ನೋಂದಾಯಿಸಿ ಇಬ್ಬರು ಸಾಕ್ಷಿಗಳಿಂದ ಸಹಿ ಹಾಕಿಸಬೇಕು.
- ಒಂದು ವೇಳೆ, ಒಂದು ಪ್ರದೇಶದಲ್ಲಿ ವಾಸಿಸುವ ವ್ಯಕ್ತಿ ಮತ್ತೊಂದು ಪ್ರದೇಶದ ಚರ್ಚಿನಲ್ಲಿ ಮದುವೆಯಾಗುವುದಾದಲ್ಲಿ ತನ್ನ ವಾಸ ಸ್ಥಳದ ಚರ್ಚಿನಿಂದ ಅನುಮೋದನೆ ಪತ್ರವನ್ನು ಪಡೆದುಕೊಂಡು ಮತ್ತೊಂದು ಚರ್ಚಿಗೆ ಸಲ್ಲಿಸಬೇಕು.

# ಕಡ್ಡಾಯ ವಿವಾಹ ನೋಂದಣಿ

ಅನೇಕ ಮಹಿಳಾ ಸಂಘಟನೆಗಳು ಮತ್ತು ಮಹಿಳಾ ಆಯೋಗದ ಸಂಘಟಿತ ಬೇಡಿಕೆಯ ಪರಿಣಾಮವಾಗಿ 2006ರ ಎಪ್ರಿಲ್ 14 ರಂದು ಸರ್ವೋಚ್ಚ ನ್ಯಾಯಾಲಯವು ವಿವಾಹಗಳು ಕಡ್ಡಾಯವಾಗಿ ನೋಂದಣಿ ಆಗುವಂತೆ ಸೂಕ್ತ ಕಾನೂನು ರಚಿಸಿ, ಮೂರು ತಿಂಗಳೊಳಗೆ ಜಾರಿಗೊಳಿಸಬೇಕೆಂದು ರಾಜ್ಯ ಸರಕಾರಗಳಿಗೆ ಆದೇಶ ನೀಡಿದೆ. ಕರ್ನಾಟಕ ಸರಕಾರವು ಕರ್ನಾಟಕ ಮದುವೆಗಳ (ನೋಂದಣಿ ಮತ್ತು ಇತರೆ ಸೌಲಭ್ಯಗಳು) ಕಾಯ್ದೆ – 1976 ವಿಧಿ (3) ರ ಪ್ರಕಾರ, ತಮ್ಮ ಸಮಾಜದ ಯಾವುದೇ ವಿಧಿ ವಿಧಾನಗಳ ಅನ್ವಯ ಕಾನೂನು ಸಮ್ಮತ ಮದುವೆಯಾದ ದಂಪತಿಗಳು ತಮ್ಮ ವಿವಾಹವನ್ನು ನೋಂದಣಿ ಮಾಡಿಸುವುದನ್ನು ಎಲ್ಲ ಧರ್ಮದವರಿಗೂ ಕಡ್ಡಾಯ ಮಾಡಿದೆ. ಹಿಂದೂ ಧರ್ಮದ ದಂಪತಿಗಳು ಉಪ ನೋಂದಣಾಧಿಕಾರಿ ಕಛೇರಿಯ ವಿವಾಹ ನೋಂದಣಾಧಿಕಾರಿಯಿಂದ, ಕ್ರೈಸ್ತ ಧರ್ಮದ ದಂಪತಿಗಳು ಕರ್ನಾಟಕ ಸರಕಾರ ನೇಮಿಸಿದ ವಿವಾಹ ಕ್ರೈಸ್ತ ನೋಂದಣಾಧಿಕಾರಿಯಿಂದ, ಮುಸ್ಲಿಂ ಧರ್ಮದ ದಂಪತಿಗಳು ಉಪ ನೋಂದಣಾಧಿಕಾರಿ ಕಛೇರಿಯ ವಿವಾಹ ನೋಂದಣಾಧಿಕಾರಿಯಿಂದ ತಮ್ಮ ವಿವಾಹವನ್ನು ನೋಂದಣಿ ಮಾಡಿಸಿಕೊಳ್ಳಬೇಕು.

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಆದೇಶದಂತೆ ಗ್ರಾಮಾಂತರ ಪ್ರದೇಶಗಳಲ್ಲಿ ಮದುವೆ ನೋಂದಣಿಗೆ ಗ್ರಾಮ ಲೆಕ್ಕಿಗರಿಗೆ (ವಿ.ಎ) ಅಧಿಕಾರಿ ನೀಡಿ, ಗ್ರಾಮ ಲೆಕ್ಕಿಗರ ವ್ಯಾಪ್ತಿಯಲ್ಲಿ ನಡೆಯುವ ವಿವಾಹಗಳನ್ನು (ಸಾಮೂಹಿಕ ವಿವಾಹವೂ ಸೇರಿದಂತೆ) ಅವರು ಕಡ್ಡಾಯವಾಗಿ ನೋಂದಣಿ ಮಾಡಬೇಕೆಂದು 27-7-2011 ರಂದು ಕಂದಾಯ ಇಲಾಖೆಯು ಆದೇಶ ಹೊರಡಿಸಿದೆ.

**ವಿವಾಹ ನೋಂದಣಿಯ ಉಪಯೋಗಗಳು, ಅಗತ್ಯಗಳು**

- ಮದುವೆಗೆ ಕಾನೂನಿನ ಮಾನ್ಯತೆ ದೊರೆಯುತ್ತದೆ.
- ವಿವಾಹ ನೋಂದಣಿ ಪತ್ರವು ಒಂದು ಸರ್ಕಾರಿ ದಾಖಲೆಯಾಗಿದ್ದು, ಮಹಿಳೆಗೆ ಆತ್ಮವಿಶ್ವಾಸವನ್ನು ಹಾಗೂ ಸಂರಕ್ಷಣೆಯ ಭಾವನೆಯನ್ನು ಒದಗಿಸಿಕೊಡುತ್ತದೆ.
- ನ್ಯಾಯಾಲಯದಲ್ಲಿ ವಿಚ್ಛೇದನ ಮತ್ತು ಜೀವನಾಂಶಗಳನ್ನು ಕೋರುವಾಗ, ಮಗುವಿನ ಸುಪರ್ದಿ ಬಯಸಿರುವಾಗ, ಆಸ್ತಿಯಲ್ಲಿ ಪಾಲು ಬರಬೇಕಾಗಿರುವಾಗ 'ವಿವಾಹ ನೋಂದಣಿ ಪತ್ರ'ವು ಸಹಾಯಕ್ಕೆ ಬರುತ್ತದೆ.
- ಪ.ಜಾತಿ/ ಪ. ಪಂಗಡದವರು ಅನ್ಯ ಜಾತಿಯೊಂದಿಗೆ ವಿವಾಹವಾದಲ್ಲಿ ಸರಕಾರದ ಸವಲತ್ತು ಪಡೆಯಲು.
- ವಿದೇಶಗಳಿಗೆ ಪ್ರವಾಸ ಮಾಡಲು ಸಂಬಂಧಪಟ್ಟ ದಾಖಲೆಗಳನ್ನು ಪಡೆಯುವಾಗ ವಿವಾಹ ನೋಂದಣಿ ಪತ್ರವನ್ನು ಲಗತ್ತಿಸಬೇಕಾಗುತ್ತದೆ.
- ಸೈನ್ಯದಲ್ಲಿ ಕೆಲಸ ಮಾಡಿದವರ ಪತ್ನಿಯರಿಗೆ ಪಿಂಚಣಿ ದೊರೆಯಲು.
- ಪತಿಯ ಮರಣಾ ನಂತರ ಬ್ಯಾಂಕ್ ಖಾತೆ, ಠೇವಣಿ ಹಾಗೂ ಜೀವ ವಿಮೆಗಳಲ್ಲಿ ನಾಮ ನಿರ್ದೇಶನವಿದ್ದರೂ ಸಹ, ಪತ್ನಿಯ ಹಕ್ಕು ಸಾಬೀತುಪಡಿಸಲು ವಿವಾಹ ನೋಂದಣಿ ಪತ್ರ ಕಡ್ಡಾಯವಾಗಿ ಬೇಕಾಗುತ್ತದೆ.
- ಮಕ್ಕಳನ್ನು ದತ್ತು ತೆಗೆದುಕೊಳ್ಳಲು.
- ಕಾನೂನು ಹಾಗೂ ಸರಕಾರದ ದೃಷ್ಟಿಯಿಂದ ಕುಟುಂಬ ಘಟಕದ ವಿಶೇಷ ಸಂರಕ್ಷಣೆ, ಆರೋಗ್ಯ ಮತ್ತು ಪೋಷಣೆಗಾಗಿ ಅಂತಾರಾಷ್ಟ್ರೀಯ ಮಟ್ಟದ ಯೋಜನೆಗಳನ್ನು ರೂಪಿಸಲು ಮತ್ತು ಕಾರ್ಯಗತಗೊಳಿಸಲು.
- ದ್ವಿಪತ್ನಿತ್ವದಂತಹ ಪಿಡುಗನ್ನು ತೊಡೆದುಹಾಕಲು.
- ಹೆಂಡತಿಗೆ, ವಿಧವೆಗೆ ಮತ್ತು ಮಕ್ಕಳಿಗೆ ಬರಬೇಕಾದ ಆಸ್ತಿಯ ಪಾಲನ್ನು ಪಡೆದುಕೊಳ್ಳಲು.
- ಸರಕಾರಿ ಸೇವೆಗಳನ್ನು ಪಡೆದುಕೊಳ್ಳಲು.

**ವಿವಾಹ ನೋಂದಣಿ ಪ್ರಕ್ರಿಯೆ**

**ಹಿಂದೂ** : ದಂಪತಿಗಳ ವಾಸ ಸ್ಥಳ ಅಥವಾ ವಿವಾಹ ನಡೆದ ಸ್ಥಳದ ವ್ಯಾಪ್ತಿಗೆ ಬರುವ ಉಪ ನೋಂದಣಿ ಅಧಿಕಾರಿಗಳ ಕಛೇರಿಯಿಂದ ಅರ್ಜಿ ನಮೂನೆಯನ್ನು ಪಡೆದು (ಈಗ ಅಂತರ್ಜಾಲದಲ್ಲೂ ಲಭ್ಯವಿದೆ) ಅದರಲ್ಲಿ ವಿವಾಹದ ದಿನಾಂಕ, ಸ್ಥಳ, ಗಂಡು ಮತ್ತು ಹೆಣ್ಣಿನ ವಿಳಾಸ ಮತ್ತು ಸಹಿ ಮೂರು ಮಂದಿ ಸಾಕ್ಷಿದಾರರ ವಿಳಾಸ ಮತ್ತು ಸಹಿ ನಮೂದಿಸಬೇಕು.

- ಮದುವೆಯಾಗಿರುವುದನ್ನು ದೃಢೀಕರಿಸಲು ಗಂಡು ಮತ್ತು ಹೆಣ್ಣು ಜತೆಯಲ್ಲಿರುವ 5 ಭಾವಚಿತ್ರಗಳು.
- ವಯಸ್ಸನ್ನು ದೃಢೀಕರಿಸುವ ಎಸ್‌ಎಸ್‌ಎಲ್‌ಸಿ ಅಂಕ ಪಟ್ಟಿ, ಜನ್ಮ ದಿನಾಂಕ ಪತ್ರ, ಪಾಸ್‌ಪೋರ್ಟ್ ಅಥವಾ ಬೇರೆ ಯಾವುದೇ ದಾಖಲೆಗಳು – ಇವುಗಳಲ್ಲಿ ಯಾವುದಾದರೂ ಒಂದರ ನೋಟರಿ ಮಾಡಿದ ಪತ್ರ.
- ವಾಸ ಸ್ಥಳದ ದಾಖಲೆಯನ್ನು ದೃಢೀಕರಿಸುವ ಪಡಿತರ ಚೀಟಿ ಅಥವಾ ಪಾಸ್‌ಪೋರ್ಟ್‌ನ ನೋಟರಿ ಮಾಡಿದ ಪತ್ರ.
- ಇವೆಲ್ಲವುಗಳನ್ನು ಅರ್ಜಿಯೊಂದಿಗೆ ಲಗತ್ತಿಸಿ ನಗದಿತ ಶುಲ್ಕದೊಂದಿಗೆ ವಿವಾಹ ನೋಂದಣಾಧಿಕಾರಿಗೆ ನೀಡಬೇಕು.
- ವಿವಾಹಾಧಿಕಾರಿ ಎಲ್ಲವನ್ನೂ ಪರಿಶೀಲಿಸಿ ವಿವಾಹವನ್ನು ನೋಂದಾಯಿಸಿ ದೃಢೀಕರಣ ಪತ್ರವನ್ನು ನೀಡುತ್ತಾರೆ.
- ದಂಪತಿಗಳು ಖುದ್ದಾಗಿ ದೃಢೀಕರಣ ಪತ್ರವನ್ನು ಪಡೆಯಬೇಕು.

**ಕ್ರೈಸ್ತ** : ದಂಪತಿಗಳು ಚರ್ಚ್‌ನ ಪಾದ್ರಿ ನೀಡುವ ವಿವಾಹ ದಾಖಲೆ ಪತ್ರವನ್ನು ಪಡೆದು, ತಮ್ಮ ವಾಸ್ತವ್ಯ ಅಥವಾ ವಿವಾಹ ನಡೆದ ಚರ್ಚಿನ ವ್ಯಾಪ್ತಿಗೆ ಬರುವ, ಕರ್ನಾಟಕ ಸರಕಾರ ನೇಮಿಸಿದ ಕ್ರೈಸ್ತ ವಿವಾಹಾಧಿಕಾರಿಗೆ ನೀಡಬೇಕು.

- ವಿವಾಹಾಧಿಕಾರಿಯ ಕಛೇರಿಯಲ್ಲಿ ದೊರೆಯುವ ಅರ್ಜಿಯನ್ನು ಪಡೆದು ಇಬ್ಬರು ಸಾಕ್ಷಿಗಳ ವಿಳಾಸ ಮತ್ತು ಸಹಿ ಸಹಿತವಾಗಿ ಅರ್ಜಿಯಲ್ಲಿ ಕೇಳಿರುವ ವಿವರಗಳನ್ನು ಭರ್ತಿ ಮಾಡಬೇಕು.
- ದಂಪತಿಗಳು ಪ್ರತ್ಯೇಕವಾಗಿರುವ ತಲಾ 4 ಭಾವಚಿತ್ರಗಳನ್ನು ನೀಡಬೇಕು.
- ವಿಳಾಸ ಮತ್ತು ವಯಸ್ಸಿನ ದೃಢೀಕರಣಕ್ಕಾಗಿ ದಾಖಲೆಗಳ ಪ್ರತಿಯನ್ನು ಲಗತ್ತಿಸಬೇಕು.
- ದಂಪತಿಗಳು ಖುದ್ದಾಗಿ ವಿವಾಹ ದೃಢೀಕರಣ ಪತ್ರವನ್ನು ಪಡೆಯಬೇಕು.

**ಮುಸ್ಲಿಂ** : ಉಪ ನೋಂದಣಾಧಿಕಾರಿ ಕಛೇರಿಯಿಂದ ಅರ್ಜಿಯನ್ನು ಪಡೆದು ಕೇಳಿರುವ ವಿವರಗಳನ್ನು ಭರ್ತಿ ಮಾಡಬೇಕು.

ವಯಸ್ಸು ಹಾಗೂ ವಿಳಾಸವನ್ನು ದೃಢೀಕರಿಸುವ ಯಾವುದಾದರೂ ದಾಖಲೆಗಳ ನೋಟರಿ ಮಾಡಿದ ಪ್ರತಿ. ಆಮಂತ್ರಣ ಪತ್ರಿಕೆ, ಗಂಡ ಹೆಂಡತಿಯರು ಪ್ರತ್ಯೇಕವಾಗಿರುವ ತಲಾ 3 ಭಾವ ಚಿತ್ರಗಳನ್ನು, ಮಸೀದಿಯಲ್ಲಿ ಮೌಲಿಯವರು ನೀಡಿದ ವಿವಾಹ ದಾಖಲೆ ಪತ್ರ, ದಂಪತಿಗಳು ಜೊತೆಯಲ್ಲಿರುವ 6 ಭಾವಚಿತ್ರಗಳು ಇವೆಲ್ಲವನ್ನು ಅರ್ಜಿಯೊಂದಿಗೆ ಲಗತ್ತಿಸಿ ನಿಗದಿತ ಶುಲ್ಕದೊಂದಿಗೆ ದಂಪತಿಗಳಲ್ಲಿ ಒಬ್ಬರ ವಾಸ್ತವ್ಯದ ವ್ಯಾಪ್ತಿಗೆ ಬರುವ ವಿವಾಹಾಧಿಕಾರಿಗೆ ನೀಡಬೇಕು.

ನಿಗದಿತ ಶುಲ್ಕವನ್ನು ಪಾವತಿಸಿ ವಿವಾಹ ದೃಢೀಕರಣ ಪತ್ರವನ್ನು ದಂಪತಿಗಳೇ ಖುದ್ದಾಗಿ ಪಡೆಯಬೇಕು.

**ಆನ್‌ಲೈನ್ ವಿವಾಹ ನೋಂದಣಿ** : ಮದುವೆ ನೋಂದಣಿಯನ್ನು ಆನ್‌ಲೈನ್ ಮಾಡಲು ರಾಜ್ಯ ಸರಕಾರ ಮುಂದಾಗಿದೆ. ಆಧಾರ್ ಆಧಾರಿತ ಆನ್‌ಲೈನ್ ಮದುವೆ ನೋಂದಣಿಯನ್ನು ಪರಿಚಯಿಸಲು ಅದು ಇಚ್ಛಿಸಿದೆ. ಅರ್ಜಿ ಸಲ್ಲಿಸುವಲ್ಲಿಂದ ತೊಡಗಿ ಮದುವೆ ನೋಂದಣಿ ಪತ್ರದ ಪ್ರಿಂಟ್‌ನ ತನಕ ಎಲ್ಲವೂ ಆನ್‌ಲೈನ್‌ನಲ್ಲಿಯೇ ಆಗಲಿದೆ. ಕಡಿಮೆಯೆಂದರೆ ಆರರಿಂದ ಏಳು ದಿನ, ಹೆಚ್ಚೆಂದರೆ 15 ದಿನದ ಸಮಯ ಬೇಕಾಗುತ್ತದೆ. ಇದು ಪ್ರಾಯೋಗಿಕವಾಗಿ ಬೆಂಗಳೂರಿನಲ್ಲಿ ಶೀಘ್ರವಾಗಿ ಆರಂಭಗೊಳ್ಳಲಿದೆ. ಆನಂತರ ಇತರೆಡೆ ಚಾಲನೆಗೊಳ್ಳಲಿದೆ. (ಕೃಪೆ: ಅಂತರ್ಜಾಲ ಮಾಹಿತಿ).

**ವಿಶೇಷ ವಿವಾಹ ನೋಂದಣಿ**: ಅಂತರ್ಜಾತೀಯ, ಅಂತರ್‌ಧರ್ಮೀಯ ವಿವಾಹವಾಗುವವರು ಅಥವಾ ಇತರ ಯಾವುದೇ ಧರ್ಮದ ಗಂಡು ಹೆಣ್ಣು ಸುಲಭವಾಗಿ, ಅತೀ ಕಡಿಮೆ ಖರ್ಚಿನಲ್ಲಿ ಮದುವೆಯಾಗುವ ಅವಕಾಶವನ್ನು ಕಾನೂನು ನೀಡಿದೆ. ಇದಕ್ಕೆ 'ವಿಶೇಷ ವಿವಾಹ' ಅಥವಾ ಸಾಮಾನ್ಯ ಭಾಷೆಯಲ್ಲಿ 'ರಿಜಿಸ್ಟರ್ಡ್ ಮದುವೆ' ಎಂದು ಕರೆಯುತ್ತಾರೆ. ವಧು ವರರು ಪ್ರತ್ಯೇಕವಾಗಿ ತಮ್ಮ ವಯಸ್ಸು, ವಾಸ ಸ್ಥಳ ದಾಖಲೆ, ಭಾವಚಿತ್ರಗಳನ್ನು ನೀಡಿ ನಿಗದಿತ ಶುಲ್ಕದೊಂದಿಗೆ ಅರ್ಜಿ ಸಲ್ಲಿಸಬೇಕು. ಈ ಅರ್ಜಿ ಸಲ್ಲಿಸಿ 30 ದಿನದೊಳಗೆ

ನೋಟೀಸು ನೀಡಲಾಗುವುದು. ಯಾವುದೇ ಅಕ್ಷೇಪಣೆಗಳಿಲ್ಲದಿದ್ದಲ್ಲಿ ವಧೂ ವರರನ್ನು ನೋಂದಣಿ ಅಧಿಕಾರಿಯ ಮುಂದೆ, ಪತಿ ಪತ್ನಿಯರಾಗಿ ಬಾಳುವಂತೆ 3 ಸಾಕ್ಷಿಗಳ ಸಮ್ಮುಖದಲ್ಲಿ ಪ್ರಮಾಣ ಮಾಡಿಸಿ ಮದುವೆ ಮಾಡಲಾಗುತ್ತದೆ. ನಂತರ ವಿವಾಹ ದೃಢೀಕರಣ ಪತ್ರವನ್ನು ನೀಡಲಾಗುತ್ತದೆ. ನೋಂದಣಿಯನ್ನು ಮಧ್ಯವರ್ತಿಗಳ ಪ್ರವೇಶವಿಲ್ಲದೆ ಸುಲಭದಲ್ಲಿ ಮಾಡಬಹುದಾಗಿದೆ.

**ಮೌಲ್ಯಮಾಪನ**

1. ಮದುವೆಗೆ ಸಂಬಂಧಿಸಿದಂತೆ ಬೇರೆ ಬೇರೆ ಧರ್ಮದವರಿಗೆ ಬೇರೆ ಬೇರೆ ಕಾನೂನುಗಳು ಇವೆ. (ಸರಿ)
2. ಸಾಂಪ್ರದಾಯಿಕವಾಗಿ ಮದುವೆಯಾದರೂ ಮದುವೆಯನ್ನು ಕಡ್ಡಾಯವಾಗಿ ನೋಂದಣಿ ಮಾಡಬೇಕು.(ಸರಿ)
3. ಮುಸ್ಲಿಂ ವಿವಾಹವನ್ನು ಉಪ ನೋಂದಣಾಧಿಕಾರಿ ಕಚೇರಿಯಲ್ಲಿ (ಸಬ್ ರಿಜಿಸ್ಟ್ರಾರ್) ನೋಂದಣಿ ಮಾಡಿಸಿಕೊಳ್ಳಬೇಕು.(ಸರಿ)
4. ಕ್ರೈಸ್ತ ದಂಪತಿಗಳು ಉಪ ನೋಂದಣಾಧಿಕಾರಿ ಕಚೇರಿಯಲ್ಲಿ ವಿವಾಹ ನೋಂದಣಿ ಮಾಡಿಸಿಕೊಳ್ಳಬೇಕು. (ತಪ್ಪು)
5. ಕರ್ನಾಟಕ ಸರಕಾರವು ವಿವಾಹ ನೋಂದಣಿಯನ್ನು ಕಡ್ಡಾಯಗೊಳಿಸಿಲ್ಲ. (ತಪ್ಪು)
6. ಮುಸ್ಲಿಂ ಧರ್ಮದ ಪ್ರಕಾರ ತ್ರಿವಳಿ ತಲಾಖ್ ನೀಡಿದರೆ ವಿವಾಹ ವಿಚ್ಛೇಧನವಾಗುತ್ತದೆ. (ತಪ್ಪು)
7. ಚರ್ಚಿನಲ್ಲಿ ನಡೆದ ಮದುವೆಯನ್ನು ಅಸಿಂಧು ಎಂದು ಘೋಷಿಸಿದ್ದರೂ ಮರು ಮದುವೆಯಾಗಬೇಕಾದರೆ ನ್ಯಾಯಾಲಯದಿಂದ ವಿಚ್ಛೇದನ ಪಡೆದುಕೊಳ್ಳಬೇಕು. (ಸರಿ)
8. ಮುಸ್ಲಿಂ ಧರ್ಮದ ವಿವಾಹದಲ್ಲಿ ಮದುವೆಯಾಗುವವರಿಬ್ಬರೂ ಮುಸ್ಲಿಂ ಧರ್ಮಕ್ಕೆ ಸೇರಿದವರಾಗಿರಬೇಕಾಗಿಲ್ಲ.(ಸರಿ)
9. ಗ್ರಾಮ ಮಟ್ಟದ ಮದುವೆಗಳನ್ನು ನೋಂದಣಿ ಮಾಡಲು ಗ್ರಾಮ ಲೆಕ್ಕಾಧಿಕಾರಿಗೆ ಅಧಿಕಾರ ನೀಡಲಾಗಿದೆ. (ಸರಿ)
10. ವಿವಾಹ ನೋಂದಣಿ ಪತ್ರವು ಒಂದು ಸರಕಾರಿ ದಾಖಲೆಯಾಗಿದೆ. (ಸರಿ)

# ಕೆಲಸದ ಸ್ಥಳದಲ್ಲಿ ಮಹಿಳೆಯರ ಮೇಲಿನ ಲೈಂಗಿಕ ಕಿರುಕುಳ (ಪ್ರತಿಬಂಧ, ನಿಷೇಧ ಮತ್ತು ಪರಿಹಾರ) ಕಾಯ್ದೆ-2013

**ಪ್ರಸ್ತಾವನೆ**

ಇಂದು ಹೆಚ್ಚು ಸಂಖ್ಯೆಯಲ್ಲಿ ಮಹಿಳೆಯರು ಉದ್ಯೋಗ ಕ್ಷೇತ್ರವನ್ನು ಪ್ರವೇಶಿಸುತ್ತಿದ್ದಾರೆ. ರಾತ್ರಿ ಪಾಳಿ, ಹಗಲು ಪಾಳಿ ಎಂಬ ಬೇಧವಿಲ್ಲದೆ ದುಡಿಯುತ್ತಿದ್ದಾರೆ. ಹಾಗೆಯೇ ದುಡಿಯುವ ಸ್ಥಳದಲ್ಲಿ ಮಹಿಳೆಯರ ಮೇಲೆ ಲೈಂಗಿಕ ಕಿರುಕುಳಗಳು ಹೆಚ್ಚಾಗುತ್ತಿವೆ. ಮಹಿಳೆಯರಿಗೆ ಸುರಕ್ಷಿತ ವಾತಾವರಣವನ್ನು ಕಲ್ಪಿಸಬೇಕಾಗಿರುವುದು ಸರ್ಕಾರದ ಕರ್ತವ್ಯ. ಈ ಹಿನ್ನೆಲೆಯಲ್ಲಿ **ಕೆಲಸದ ಸ್ಥಳದಲ್ಲಿ ಮಹಿಳೆಯರ ಮೇಲಿನ ಲೈಂಗಿಕ ಕಿರುಕುಳ (ಪ್ರತಿಬಂಧ, ನಿಷೇಧ ಮತ್ತು ಪರಿಹಾರ) ಕಾಯ್ದೆ – 2013** ಕಾಯ್ದೆಯನ್ನು ಜಾರಿಗೆ ತಂದಿದೆ.

**ಹಿನ್ನೆಲೆ:**

ರಾಜಸ್ತಾನ ಸರಕಾರದ ಮಹಿಳಾಭಿವೃದ್ಧಿ ಕಾರ್ಯಕ್ರಮದಲ್ಲಿ ಸಾಥಿನ್ ಆಗಿ ಕೆಲಸ ಮಾಡುತ್ತಿದ್ದ ಭಾಂವ್ರಿದೇವಿ ಎಂಬ ಮಹಿಳೆ ಹಳ್ಳಿಗಳಲ್ಲಿ ನಡೆಯುವ ಬಾಲ್ಯ ವಿವಾಹ ಪದ್ಧತಿಯನ್ನು ತಡೆಗಟ್ಟುತ್ತಿದ್ದರು. ಆ ಊರಿನ ಮೇಲ್ವರ್ಗಕ್ಕೆ ಸೇರಿದ ಕುಟುಂಬವೊಂದರಲ್ಲಿ ನಡೆಯುತ್ತಿದ್ದ ಬಾಲ್ಯ ವಿವಾಹವನ್ನು ನಿಲ್ಲಿಸಿದ ಕಾರಣಕ್ಕೆ ಆ ಕುಟುಂಬದ ವ್ಯಕ್ತಿಗಳಿಂದ ಸಾಮೂಹಿಕ ಅತ್ಯಾಚಾರಕ್ಕೆ ಒಳಗಾದರು. ಇದನ್ನು ವಿರೋಧಿಸಿ ಭಾಂವ್ರಿದೇವಿ ನ್ಯಾಯಾಲಯದ ಮೊರೆ ಹೋದರು. ಸ್ಥಳೀಯ ನ್ಯಾಯಾಲಯದಲ್ಲಿ ಭಾಂವ್ರಿದೇವಿಗೆ ನ್ಯಾಯ ಸಿಗಲಿಲ್ಲ. ಸುಪ್ರೀಂಕೋರ್ಟ್ ಮೆಟ್ಟಿಲೇರಿದರು. 'ವಿಶಾಖ' ಎಂಬ ಮಹಿಳಾ ಸಂಘಟನೆ ಬಾಂವ್ರಿದೇವಿಗೆ ಬೆಂಬಲ ನೀಡಿತು. ದುಡಿಯುವ ಸ್ಥಳದಲ್ಲಿ ನಡೆಯುವ ಲೈಂಗಿಕ ಕಿರುಕುಳಕ್ಕೆ ಸಂಬಂಧಿಸಿದಂತೆ ಯಾವ ಕಾನೂನುಗಳೂ ಇಲ್ಲದಿರುವುದು ಸುಪ್ರೀಂಕೋರ್ಟ್ ಗಮನಿಸಿತು. ಅಂತಾರಾಷ್ಟ್ರೀಯ ಒಪ್ಪಂದವಾದ 'ಸೀಡಾ'ವನ್ನು ಆಧರಿಸಿ ಕೆಲಸದ ಸ್ಥಳದಲ್ಲಿ ಲೈಂಗಿಕ ಕಿರುಕುಳವನ್ನು ತಡೆಗಟ್ಟಲು ಉದ್ಯೋಗದಾತರಿಗೆ ಮಾರ್ಗಸೂಚಿಗಳನ್ನು ಹೊರಡಿಸಿತು. ಇದನ್ನು ವಿಶಾಖ ಮಾರ್ಗಸೂಚಿಯೆಂದೇ ಕರೆಯಲಾಗುತ್ತದೆ. ಇದು ಕಾನೂನಾಗಿ ಜಾರಿಗೆ ಬರಬೇಕೆಂದು ಹಲವು ಮಹಿಳಾ ಸಂಘಟನೆಗಳ, ಮಹಿಳಾ ಚಳುವಳಿಗಾರರ ಬೇಡಿಕೆಯ ಮೇರೆಗೆ ರಾಷ್ಟ್ರೀಯ ಮಹಿಳಾ ಆಯೋಗವು ಕೆಲಸದ ಸ್ಥಳದಲ್ಲಿ ಲೈಂಗಿಕ ಕಿರುಕುಳವನ್ನು ತಡೆಗಟ್ಟುವ ನಿಟ್ಟಿನಲ್ಲಿ ಒಂದು ಕರಡು ಮಸೂದೆಯನ್ನು ಸಿದ್ಧಪಡಿಸಿತು. ಇದು ಕೆಲವು ಮಾರ್ಪಾಡುಗಳೊಂದಿಗೆ ಅಂಗೀಕೃತಗೊಂಡು 2013ರಲ್ಲಿ ಕಾನೂನಾಗಿ ಜಾರಿಗೆ ಬಂದಿತು.

**ಲೈಂಗಿಕ ಕಿರುಕುಳ ಎಂದರೆ**

- ದೈಹಿಕ ಸಂಪರ್ಕ ಮತ್ತು ಲೈಂಗಿಕ ಎನಿಸಬಹುದಾದ ಅಭಿಪ್ರಾಯಗಳನ್ನು ವ್ಯಕ್ತಪಡಿಸುವುದು.
- ಅಧಿಕಾರವನ್ನು ಬಳಸಿ ಅಥವಾ ಆಮಿಷಗಳನ್ನು ತೋರಿಸಿ ಲೈಂಗಿಕ ಪ್ರಯೋಜನಕ್ಕಾಗಿ ಒತ್ತಾಯ ಅಥವಾ ವಿನಂತಿ.
- ಲೈಂಗಿಕ ಸಂದೇಶವುಳ್ಳ ಸಂಕೇತಗಳು.
- ಅಶ್ಲೀಲ ಚಿತ್ರಗಳನ್ನು ತೋರಿಸುವುದು.
- ಲೈಂಗಿಕ ಸ್ವರೂಪದ ಇತರ ಯಾವುದೇ ಅನಪೇಕ್ಷಿತ, ದೈಹಿಕ, ಮಾತಿನ ಮೂಲಕದ ಅಥವಾ ಮಾತಿನ ಮೂಲಕವಲ್ಲದ ನಡೆವಳಿಕೆ.

**ಕೆಲಸದ ಸ್ಥಳ**

ಸರಕಾರಿ ಅಥವಾ ಖಾಸಗಿ ವಲಯದ ಎಲ್ಲಾ ಸಂಸ್ಥೆಗಳನ್ನು ಒಳಗೊಂಡಿದೆ. ಆಸ್ಪತ್ರೆ, ನರ್ಸಿಂಗ್ ಹೋಂಗಳು, ಮನೆ, ಅಸಂಘಟಿತ ವಲಯಗಳು, ಸರಕಾರೇತರ ಸಂಸ್ಥೆಗಳು, ಸೇವಾ ವಲಯಗಳು, ಶಾಲಾ ಕಾಲೇಜುಗಳು, ಮನೋರಂಜನೆ, ಮಾಧ್ಯಮ ವಲಯ, ಆರ್ಥಿಕ ಕ್ಷೇತ್ರಗಳು ಕೂಡ ಈ ಪಟ್ಟಿಯಲ್ಲಿ ಸೇರಿಕೊಂಡಿವೆ.

**ಉದ್ಯೋಗಿ**

ಈ ಕೆಳಗಿನ ಕ್ಷೇತ್ರದಲ್ಲಿ ಕೆಲಸ ಮಾಡುವ ಯಾವುದೇ ವ್ಯಕ್ತಿ,

- ಖಾಯಂ, ತಾತ್ಕಾಲಿಕ ಅಥವಾ ದಿನಗೂಲಿ ಕೆಲಸಗಾರರು
- ನೇರವಾಗಿ ಅಥವಾ ಮಧ್ಯವರ್ತಿಯ ಮುಖಾಂತರ ನೇಮಿಸಲ್ಪಟ್ಟವರು
- ಗುತ್ತಿಗೆದಾರನ ಅಡಿಯಲ್ಲಿ ಕೆಲಸ ಮಾಡುವವರು. ಕೆಲಸಕ್ಕಾಗಿ ಕೆಲಸದ ತರಬೇತಿ ಪಡೆಯುತ್ತಿರುವವರು
- ಮನೆಕೆಲಸ ಮಾಡುವವರು
- ಶಿಕ್ಷಣ ಸಂಸ್ಥೆಗಳಾದರೆ ವಿದ್ಯಾರ್ಥಿನಿಯರು

**ಯಾರು ದೂರು ಕೊಡಬಹುದು?**

ಯಾವುದೇ ವಯಸ್ಸಿನ ಆ ಸಂಸ್ಥೆಯ ಉದ್ಯೋಗಿಯಾಗಿರಬಹುದು ಅಥವಾ ಗ್ರಾಹಕರಿರಬಹುದು. ಒಟ್ಟಿನಲ್ಲಿ ಆ ಸಂಸ್ಥೆಯಲ್ಲಿ ಲೈಂಗಿಕ ಕಿರುಕುಳಕ್ಕೆ ಒಳಪಟ್ಟ ಮಹಿಳೆ.

**ಕಾಯ್ದೆಯ ಅನುಷ್ಠಾನ ಹೇಗೆ?**

ಈ ಕಾಯ್ದೆಯು 2016ರಲ್ಲಿ ತಿದ್ದುಪಡಿಗೊಂಡಿರುತ್ತದೆ. ಈ ತಿದ್ದುಪಡಿಯ ಅನುಸಾರ ಹಿಂದೆ ಇದ್ದ ಆಂತರಿಕ ದೂರು ಸಮಿತಿ ಮತ್ತು ಸ್ಥಳೀಯ ದೂರು ಸಮಿತಿಯನ್ನು ಆಂತರಿಕ ಸಮಿತಿ ಮತ್ತು ಸ್ಥಳೀಯ ಸಮಿತಿ ಎಂದು ತಿದ್ದುಪಡಿಗೊಳಿಸಲಾಗಿದೆ.

**ಆಂತರಿಕ ಸಮಿತಿ**

ಕೆಲಸದ ಸ್ಥಳದಲ್ಲಿ ಲೈಂಗಿಕ ಕಿರುಕುಳ ತಡೆಗಟ್ಟುವ ಸಲುವಾಗಿ ಉದ್ಯೋಗದಾತರು ಹತ್ತು ಮತ್ತು ಹತ್ತಕ್ಕಿಂತ ಹೆಚ್ಚು ಕೆಲಸಗಾರರಿರುವ ಪ್ರತೀ ಸಂಸ್ಥೆಯಲ್ಲಿ 'ಆಂತರಿಕ ಸಮಿತಿ'ಯನ್ನು ರಚಿಸಬೇಕು. ಒಂದು ಸಂಸ್ಥೆಯಲ್ಲಿ ಬೇರೆ ಬೇರೆ ಸ್ಥಳಗಳಲ್ಲಿ ಘಟಕಗಳಿದ್ದರೂ(ವಿಭಾಗಗಳು) ಸಹ ಎಲ್ಲಾ ಸ್ಥಳಗಳಲ್ಲೂ 'ಆಂತರಿಕ ಸಮಿತಿ'ಯನ್ನು ರಚಿಸಬೇಕು.

ಪ್ರತಿಯೊಂದು ಆಂತರಿಕ ಸಮಿತಿಯಲ್ಲಿ ಆ ಸಂಸ್ಥೆಯಲ್ಲಿ ಕೆಲಸ ಮಾಡುವ ಹಿರಿಯ ಮಹಿಳಾ ಉದ್ಯೋಗಿಯೊಬ್ಬರನ್ನು ಅಧ್ಯಕ್ಷೆಯನ್ನಾಗಿ ನೇಮಿಸಬೇಕು. ಮಹಿಳಾ ಅಭಿವೃದ್ಧಿ ಮತ್ತು ಸಾಮಾಜಿಕ ವಿಷಯಗಳ ಮೇಲೆ ಕಾಳಜಿ ಇರುವ ಹಾಗೂ ಕಾನೂನಿನ ಜ್ಞಾನ ಇರುವ ಇಬ್ಬರು ಉದೋಗಿಗಳನ್ನು ಸದಸ್ಯರನ್ನಾಗಿ ನೇಮಿಸಬೇಕು. ಸಮಿತಿಯ ಕನಿಷ್ಠ ಅರ್ಧದಷ್ಟು ಸದಸ್ಯರು ಮಹಿಳೆಯರಿರಬೇಕು.

ಹಿರಿಯ ಮಹಿಳಾ ಉದ್ಯೋಗಿ ಇಲ್ಲದಿದ್ದ ಪಕ್ಷದಲ್ಲಿ, ಸದರಿ ಕಾನೂನಿನಡಿ ನಮೂದಿಸಿದ ಆಯಾ ಪ್ರದೇಶದ ಜಿಲ್ಲಾಧಿಕಾರಿಯವರು 'ಸ್ಥಳೀಯ ಸಮಿತಿ'ಯ ಒಬ್ಬ ಸದಸ್ಯೆಯನ್ನು ಆಂತರಿಕ ಸಮಿತಿಯ ಅಧ್ಯಕ್ಷರನ್ನಾಗಿ ನೇಮಿಸಬಹುದಾಗಿದೆ. ಈ ಸಮಿತಿಗೆ ಸಂಬಂಧಪಟ್ಟ ಖರ್ಚು ವೆಚ್ಚಗಳನ್ನು ಆ ಸಂಸ್ಥೆಯ ಉದ್ಯೋಗದಾತರೇ ವಹಿಸಿಕೊಳ್ಳಬೇಕು.

**ಸ್ಥಳೀಯ ಸಮಿತಿ**

ಸರಕಾರವು ಮ್ಯಾಜಿಸ್ಟ್ರೇಟ್ ಅಥವಾ ಹೆಚ್ಚುವರಿ ಮ್ಯಾಜಿಸ್ಟ್ರೇಟ್ ಅಥವಾ ಜಿಲ್ಲಾಧಿಕಾರಿಯವರನ್ನು ಪ್ರತೀ ಜಿಲ್ಲೆಗೆ ಜಿಲ್ಲಾ ಅಧಿಕಾರಿಯನ್ನಾಗಿ ನೇಮಿಸಬೇಕು ಮತ್ತು ನೇಮಿಸಲ್ಪಟ್ಟ ಜಿಲ್ಲಾ ಅಧಿಕಾರಿಯು ತನ್ನ ವ್ಯಾಪ್ತಿಯ ಜಿಲ್ಲೆಗೆ ಸಂಬಂಧಿಸಿ ಸ್ಥಳೀಯ ಸಮಿತಿಯನ್ನು ರಚಿಸಬೇಕು. ಹತ್ತಕ್ಕಿಂತ ಕಡಿಮೆ ಕೆಲಸಗಾರರಿರುವ ಸಂಸ್ಥೆಯಲ್ಲಿ ಆಂತರಿಕ ಸಮಿತಿಯನ್ನು ರಚಿಸಲು ಸಾಧ್ಯವಾಗದ ಸಂದರ್ಭದಲ್ಲಿ ಅಥವಾ ಉದ್ಯೋಗದಾತನ ಮೇಲೆಯೇ ದೂರು ಇರುವ ಪಕ್ಷದಲ್ಲಿ ಸ್ಥಳೀಯ ಸಮಿತಿಯನ್ನು ರಚಿಸಬೇಕಾಗುತ್ತದೆ ಮತ್ತು ಇಲ್ಲಿ ದೂರು ನೀಡಬಹುದಾಗಿರುತ್ತದೆ.

ಅಲ್ಲದೆ ಈ ಜಿಲ್ಲಾ ಅಧಿಕಾರಿಯು ವ್ಯಾಪ್ತಿಯ ವಾರ್ಡ್–ಗ್ರಾಮ–ತಾಲೂಕುಗಳಲ್ಲಿ ಅರ್ಜಿಗಳನ್ನು ಸ್ವೀಕರಿಸಲು ನೋಡಲ್ ಅಧಿಕಾರಿಗಳನ್ನು ನೇಮಿಸಬೇಕು. ಈ ಅಧಿಕಾರಿಗಳು ದೂರು ಸ್ವೀಕರಿಸಿದ 7 ದಿನಗಳೊಳಗೆ ದೂರು ಅರ್ಜಿಯನ್ನು ಸ್ಥಳೀಯ ಸಮಿತಿಗೆ ವರ್ಗಾಯಿಸಬೇಕು.

ಸ್ಥಳೀಯ ಸಮಿತಿಗೆ ಸಮಾಜ ಸೇವೆಯಲ್ಲಿ ತೊಡಗಿಕೊಂಡ, ಮಹಿಳಾ ಸಮಸ್ಯೆಗಳ ಬಗ್ಗೆ ಕಾಳಜಿಯುಳ್ಳ, ಕಾನೂನು ಪರಿಣಿತಿಯ ವ್ಯಕ್ತಿಯನ್ನು ಅಧ್ಯಕ್ಷರನ್ನಾಗಿ ನೇಮಿಸಬೇಕು. ಒಬ್ಬರು ಸದಸ್ಯರು ಆ ಬ್ಲಾಕ್, ತಾಲೂಕು, ವಾರ್ಡ್‌ನಲ್ಲಿನ ಮಹಿಳಾ ಉದ್ಯೋಗಿಯಾಗಿರಬೇಕು.

ಸರಕಾರೇತರ ಸಂಸ್ಥೆಯಲ್ಲಿ ಕೆಲಸ ಮಾಡುವ ಮಹಿಳಾಪರ ಕಾಳಜಿಯುಳ್ಳ ಇಬ್ಬರು ವ್ಯಕ್ತಿಗಳನ್ನು ಸದಸ್ಯರನ್ನಾಗಿ ನೇಮಿಸಬೇಕು. ಅವರಲ್ಲಿ ಒಬ್ಬರಿಗೆ ಕಾನೂನಿನ ಜ್ಞಾನ ಮತ್ತು ಹಿನ್ನೆಲೆ ಇರಬೇಕು. 'ಕೌಟುಂಬಿಕ ದೌರ್ಜನ್ಯ ತಡೆ ಕಾಯ್ದೆ'ಯಡಿ ನೇಮಿಸಲ್ಪಟ್ಟ ರಕ್ಷಣಾಧಿಕಾರಿಯು ಕೂಡ ಈ ಸಮಿತಿಯ ಸದಸ್ಯರಾಗಿರುತ್ತಾರೆ.

'ಸ್ಥಳೀಯ ಸಮಿತಿ'ಯ ಖರ್ಚು ವೆಚ್ಚಗಳನ್ನು ಕೇಂದ್ರ ಸರಕಾರ ಆಯಾ ರಾಜ್ಯ ಸರಕಾರದ ಮೂಲಕ ಭರಿಸಬೇಕು.

**ತನಿಖಾ ವಿಧಾನ**

- ದೂರು ನೀಡುವವರು ದೂರಿನ 6 ಪ್ರತಿಗಳು, ಎಲ್ಲಾ ದಾಖಲೆಗಳು ಮತ್ತು ಸಾಕ್ಷಿಗಳ ಹೆಸರು, ವಿಳಾಸದೊಂದಿಗೆ ದಾಖಲಿಸಬೇಕು.
- ಸಮಿತಿಯು ದೂರಿನ ಒಂದು ಪ್ರತಿಯನ್ನು ಆಪಾದಿತನಿಗೆ 7 ದಿನಗಳೊಳಗೆ ಕಳುಹಿಸಿಕೊಡಬೇಕು.
- ಆಪಾದಿತನು 10 ದಿನಗಳಲ್ಲಿ ಪ್ರತ್ಯುತ್ತರವನ್ನು ಸೂಕ್ತ ದಾಖಲೆ ಮತ್ತು ಸಾಕ್ಷಿಗಳ ಹೆಸರು ವಿಳಾಸದೊಂದಿಗೆ ನೀಡಬೇಕು.
- ದೂರುದಾರರು ಸತತ 3 ತನಿಖಾ ಅವಧಿಗೆ ಹಾಜರಾಗದಿದ್ದರೆ ಆಕೆಗೆ ಲಿಖಿತ ನೋಟೀಸು ನೀಡಿ, 15 ದಿನಗಳ ನಂತರ ದೂರನ್ನು ವಜಾ ಮಾಡಬಹುದು.
- ಯಾವುದೇ ಕಾನೂನು ತಜ್ಞರು ತನಿಖೆಯಲ್ಲಿ ಪ್ರತಿನಿಧಿಸುವಂತಿಲ್ಲ.
- ತನಿಖೆಯನ್ನು ನಡೆಸಲು ಅಧ್ಯಕ್ಷರನ್ನೊಳಗೊಂಡಂತೆ ಕನಿಷ್ಠ 3 ಸದಸ್ಯರು ಹಾಜರಿರಬೇಕು.
- ವಿಚಾರಣೆಯ ಯಾವುದೇ ಅಂಶವನ್ನು ದೂರು, ಸಾಕ್ಷಿ, ಶಿಫಾರಸುಗಳನ್ನು ಬಹಿರಂಗಪಡಿಸಬಾರದು, ಮಾಧ್ಯಮಗಳಲ್ಲಿ ಪ್ರಕಟಿಸಬಾರದು, ಮಾಹಿತಿ ಹಕ್ಕಿನಡಿಯಲ್ಲಿ ಮಾಹಿತಿಯನ್ನು ನೀಡಬಾರದು.

**ಪರಿಹಾರಗಳು**

- ಲೈಂಗಿಕ ಕಿರುಕುಳಕ್ಕೆ ಒಳಗಾದ (ಬಾಧಿತ) ಮಹಿಳೆಗೆ ಪರಿಹಾರ ಸೂಚಿಸುವಾಗ ಅವಳ ಮಾನಸಿಕ ಆಘಾತ, ಮಾನಸಿಕ ಯಾತನೆ, ಅವಮಾನ, ವೈದ್ಯಕೀಯ ಖರ್ಚು, ಅವಳ ಮುಂದಿನ ವೃತ್ತಿಜೀವನ ಇವೆಲ್ಲವನ್ನೂ ಗಣನೆಗೆ ತೆಗೆದುಕೊಳ್ಳಬೇಕು.
- ವಿಚಾರಣೆ ಜಾರಿ ಇರುವ ಸಂದರ್ಭದಲ್ಲಿ ಸಂತ್ರಸ್ತ ಮಹಿಳೆಯ ಕೋರಿಕೆಯ ಮೇರೆಗೆ ಮಹಿಳೆಯನ್ನು ಅಥವಾ ಆಪಾದಿತನನ್ನು ಬೇರೆ ಸ್ಥಳಕ್ಕೆ ವರ್ಗಾವಣೆ ಮಾಡಬಹುದು ಅಥವಾ ಮಹಿಳೆಗೆ ಮೂರು ತಿಂಗಳು ರಜಾ ನೀಡಬಹುದು.
- ತಪ್ಪಿತಸ್ಥರ ಸಂಬಳದಿಂದ ಬಾಧಿತ ಮಹಿಳೆಗೆ ಪರಿಹಾರ ನೀಡಬಹುದು ಅಥವಾ ಅವನ ಆಸ್ತಿಯಿಂದ ವಸೂಲಿ ಮಾಡಬಹುದು.

**ಉದ್ಯೋಗದಾತನ ಕರ್ತವ್ಯಗಳು**

- ಕೆಲಸದ ಸ್ಥಳದಲ್ಲಿ ದುಡಿಯುವ ಮಹಿಳೆಯರಿಗೆ ಭದ್ರತೆ ವಾತಾವರಣವನ್ನು ಕಲ್ಪಿಸಬೇಕು.
- ಲೈಂಗಿಕ ಕಿರುಕುಳಕ್ಕೆ ಸಂಬಂಧಿಸಿದ ಅಪರಾಧ ಮತ್ತು ಶಿಕ್ಷೆಯ ಬಗ್ಗೆ ಎಲ್ಲರಿಗೂ ಕಾಣುವಂತೆ ಪ್ರಚುರಪಡಿಸಬೇಕು. ಉದಾ: ಪೋಸ್ಟರ್ ಹಾಕುವುದು.
- ದೂರು ಸಮಿತಿ ರಚನೆಯಾಗಿರುವುದರ ಬಗ್ಗೆ ಎಲ್ಲರ ಗಮನಕ್ಕೆ ತರಬೇಕು.
- ಆಗಾಗ ತರಬೇತಿ ಶಿಬಿರಗಳನ್ನು ನಡೆಸಿ ಈ ಕಾನೂನಿನ ಬಗ್ಗೆ ಜಾಗೃತಿ ಮೂಡಿಸಬೇಕು.
- ಸಮಿತಿ ಸಕ್ರಿಯವಾಗಿ ಕಾರ್ಯನಿರ್ವಹಿಸಲು ಎಲ್ಲಾ ಸೌಕರ್ಯಗಳನ್ನು ನೀಡಬೇಕು.
- ವಿಚಾರಣೆಗೆ ಸಂಬಂಧಪಟ್ಟ ವ್ಯಕ್ತಿಗಳು ಹಾಜರಾಗುವಂತೆ ನೋಡಿಕೊಳ್ಳಬೇಕು.





- ವಿಚಾರಣೆಗೆ ಅಗತ್ಯವಿರುವ ದಾಖಲೆಗಳನ್ನು ಸಮಿತಿಗೆ ಒದಗಿಸಬೇಕು.
- ಬಾಧಿತ ಮಹಿಳೆಗೆ ದೂರು ನೀಡಲು ಸಹಾಯ ಮಾಡಬೇಕು.
- ಸಮಿತಿಯ ಶಿಫಾರಸು ಮೇರೆಗೆ ಅಗತ್ಯವಾದ ಕ್ರಮ ತೆಗೆದುಕೊಳ್ಳಬೇಕು.
- ಲೈಂಗಿಕ ಕಿರುಕುಳವನ್ನು ದುರ್ನಡತೆ ಎಂದು ಸೇವಾ ನಿಯಮದಲ್ಲಿ ಸೇರಿಸಬೇಕು.
- ಆಪಾದಿತನು ಆ ಸಂಸ್ಥೆಯ ಉದ್ಯೋಗಿಯಾಗಿಲ್ಲದಿದ್ದರೆ ಆ ಮಹಿಳೆಯ ಅಭಿಪ್ರಾಯದ ಮೇರೆಗೆ ಕಾನೂನು ಕ್ರಮ ಕೈಗೊಳ್ಳಲು ಅಗತ್ಯ ಕ್ರಮ ಕೈಗೊಳ್ಳಬೇಕು.

**ಜಿಲ್ಲಾ ಅಧಿಕಾರಿಯವರ ಕರ್ತವ್ಯಗಳು**

- ಸ್ಥಳೀಯ ಸಮಿತಿಯನ್ನು ರಚಿಸುವುದು.
- ಆಂತರಿಕ ಮತ್ತು ಸ್ಥಳೀಯ ಸಮಿತಿಗಳು ನಿಗದಿತ ಸಮಯಕ್ಕೆ ವರದಿಯನ್ನು ಒಪ್ಪಿಸುವಂತೆ ನೋಡಿಕೊಳ್ಳುವುದು.
- ಸರಕಾರೇತರ ಸಂಸ್ಥೆಯೊಂದಿಗೆ ಲೈಂಗಿಕ ಕಿರುಕುಳ ಹಾಗೂ ಮಹಿಳಾ ಹಕ್ಕಿನ ಬಗೆಗಿನ ಅರಿವಿನ ಕಾರ್ಯಕ್ರಮಗಳನ್ನು ಆಯೋಜಿಸುವುದು.
- ತರಬೇತಿ ಸಾಮಗ್ರಿಗಳನ್ನು ಸಿದ್ಧಪಡಿಸುವುದು.
- ದೂರು ಸಮಿತಿಯ ಸದಸ್ಯರಿಗೆ ತರಬೇತಿ ನೀಡುವುದು.

**ಮೇಲ್ಮನವಿ**

'ಸಮಿತಿ'ಯ ವರದಿ ಅಥವಾ ಶಿಫಾರಸ್ಸಿನಂದ ತೊಂದರೆಗೊಳಗಾದ ವ್ಯಕ್ತಿಗೆ ಮೇಲ್ಮನವಿಯ ಅವಕಾಶವಿದೆ. ಇದನ್ನು 90 ದಿನಗಳೊಳಗೆ ನ್ಯಾಯಾಲಯ ಅಥವಾ ನ್ಯಾಯಮಂಡಲಿಗೆ (ಟ್ರಿಬ್ಯೂನಲ್) ಸಲ್ಲಿಸಬಹುದಾಗಿದೆ.

**ಈ ಕಾಯ್ದೆಯಡಿಯಲ್ಲಿ ದೂರು ದಾಖಲಿಸಲು ಇರುವ ಕಾಲಮಿತಿ**

| | |
|---|---|
| ದೂರು ನೀಡುವುದು ಅಥವಾ ಸಲ್ಲಿಸುವುದು | ಘಟನೆ ನಡೆದ 3 ತಿಂಗಳೊಳಗಾಗಿ ಅಂದರೆ 90 ದಿನಗಳ ಒಳಗೆ ಸಮಿತಿಗೆ ದೂರು ನೀಡಬೇಕು. |
| ಎದುರುದಾರರಿಗೆ ನೋಟಿಸು ನೀಡುವುದು | ಸಮಿತಿಗೆ ದೂರು ನೀಡಿದ 7 ದಿನಗಳೊಳಗಾಗಿ ಎದುರುದಾರರಿಗೆ ನೋಟಿಸು ನೀಡಬೇಕು. |
| ತನಿಖೆ | ದೂರು ನೀಡಿದ 90 ದಿನಗಳ ಒಳಗೆ ತನಿಖೆಯನ್ನು ಪೂರ್ಣಗೊಳಿಸಬೇಕು. |
| ಆಂತರಿಕ ಅಥವಾ ಸ್ಥಳೀಯ ಸಮಿತಿಯ ವರದಿ | ತನಿಖೆಯ 10 ದಿನಗಳ ಒಳಗಾಗಿ ಆಂತರಿಕ ಅಥವಾ ಸ್ಥಳೀಯ ಸಮಿತಿಯು ವರದಿಯನ್ನು ನೀಡಬೇಕು. |
| ಸಮಿತಿಯ ವರದಿಯ ಅನುಷ್ಠಾನ | ಅಂತಿಮ ವರದಿಯನ್ನು ಹೊರಡಿಸಿದ 60 ದಿನಗಳ ಒಳಗಾಗಿ ಅನುಷ್ಠಾನಗೊಳಿಸಬೇಕು. |
| ಮೇಲ್ಮನವಿ | ಸಮಿತಿಯ ವರದಿಯಿಂದ ತೊಂದರೆಗೊಳಗಾದ ವ್ಯಕ್ತಿಯು 90 ದಿನಗಳ ಒಳಗಾಗಿ ನ್ಯಾಯಾಲಯ ಅಥವಾ ನ್ಯಾಯಾಧೀಕರಣಕ್ಕೆ ಮೇಲ್ಮನವಿಯನ್ನು ಸಲ್ಲಿಸಬಹುದು. |

**ಚರ್ಚೆಗೆ ಪ್ರಕರಣಗಳು**

## ಪ್ರಕರಣ 1

ರಾಧಾ ಬಿಕಾಂ ಪದವೀಧರೆ. ಡಿಗ್ರಿ ಮುಗಿಯುತ್ತಿದ್ದಂತೆ ಒಂದು ಕಂಪೆನಿಯಲ್ಲಿ ಕೆಲಸ ಸಿಕ್ಕಿತು. ಸ್ವಭಾವತಃ ಸ್ನೇಹಜೀವಿಯಾಗಿದ್ದ ಅವಳು ಕೆಲಸಕ್ಕೆ ಸೇರಿದ ಕೆಲವೇ ದಿನಗಳಲ್ಲಿ ಸಹೋದ್ಯೋಗಿಗಳೊಡನೆ ಹೊಂದಿಕೊಂಡಳು. ಎಲ್ಲರನ್ನು ನಗಿಸುತ್ತಾ, ತಾನೂ ನಗುತ್ತಾ ಕೆಲಸ ಮಾಡುತ್ತಿದ್ದ ಅವಳು ಎಲ್ಲರಿಗೂ ಸ್ನೇಹಿತೆಯಾದಳು. ಅವಳ ಮೇಲಧಿಕಾರಿ ಅವಳ ಬಗ್ಗೆ ಹೆಚ್ಚು ಕಾಳಜಿ ವಹಿಸುತ್ತಿದ್ದ. 'ನಿನಗೆ ಏನಾದರೂ ತೊಂದರೆಯಾದರೆ, ತಿಳಿಯದೇ ಇದ್ದರೆ ಕೇಳು ಹೇಳಿಕೊಡುತ್ತೇನೆ' ಎನ್ನುತ್ತಿದ್ದ. ಮೇಲಧಿಕಾರಿಯ ಮಾತುಗಳಿಂದ ರಾಧಾಗೆ ಖುಷಿಯಾಗಿತ್ತು. ಅಗತ್ಯವಿದ್ದಾಗ ಅವನ ಮಾರ್ಗದರ್ಶನ ಪಡೆದು ಕೆಲಸ ಕಲಿತಳು. ದಿನ ಕಳೆದಂತೆ ಅವನು ಅವಳೊಡನೆ ಹೆಚ್ಚು ಆತ್ಮೀಯವಾಗಿ ವರ್ತಿಸುತ್ತಿದ್ದ. ಒಂದು ದಿನ ಅವನು ರಾಧಾಳಿಗೆ ಒಂದು ಫೈಲ್ ಕೊಟ್ಟು 'ಇದು ತುಂಬ ಮುಖ್ಯ, ಎಷ್ಟು ಹೊತ್ತಾದರೂ ಇವತ್ತೇ ಮುಗಿಸಿಕೊಡು' ಎಂದು ಹೇಳಿದ. ಆಗ ಕಚೇರಿ ಮುಚ್ಚಲು ಅರ್ಧ ಗಂಟೆಯಿತ್ತಷ್ಟೇ. ರಾಧಾ ಕೆಲಸದಲ್ಲಿ ಮಗ್ನಳಾದಳು. ಕಚೇರಿಯ ಕೆಲಸದ ವೇಳೆ ಮುಗಿಯುತ್ತಿದ್ದಂತೆ ಎಲ್ಲರೂ ಮನೆಗೆ ಹೊರಟುಹೋದರು. ರಾಧಾ ಮಾತ್ರ ಕೆಲಸ ಮುಗಿಸಲೇಬೇಕೆಂದು ಆಫೀಸ್‌ನಲ್ಲಿಯೇ ಇದ್ದಳು. ಎಲ್ಲರೂ ಹೋದ ನಂತರ ಮೇಲಧಿಕಾರಿ ಬಂದು ರಾಧಾಳ ಪಕ್ಕದಲ್ಲಿಯೇ ಕುಳಿತು ಅವಳ ಭುಜ, ಬೆನ್ನನ್ನು ಮುಟ್ಟುತ್ತ ಕೆಲಸದ ಬಗ್ಗೆ ವಿಚಾರಿಸಿದ. ರಾಧಾ ಮುಜುಗರ ಪಡುತ್ತಾ ಅವನ ಕೈಯನ್ನು ಸರಿಸಿ ತನ್ನ ಕೆಲಸ ಮುಗಿಯಿತೆಂದು ಫೈಲ್‌ನ್ನು ಅವನಿಗೆ ಕೊಟ್ಟು ಹೊರಡಲು ಸಿದ್ಧಳಾದಳು. ತಡವಾಗಿದ್ದರಿಂದ ತನ್ನ ಕಾರಿನಲ್ಲಿ ಮನೆಗೆ ಬಿಡುತ್ತೇನೆಂದು ಹೇಳಿ ರಾಧಾಳನ್ನು ಕರೆದ. ರಾಧಾ ಹಿಂಜರಿಯುತ್ತಲೇ ಒಪ್ಪಿಕೊಂಡಳು. ಕಾರಿನಲ್ಲಿ ಹೋಗುತ್ತಾ ರಾಧಾಳ ಕೆಲಸವನ್ನು ಹೊಗಳುತ್ತಾ, 'ನಿನ್ನ ಕೆಲಸ ಖಾಯಂ ಆಗಲು ಸಹಾಯ ಮಾಡುತ್ತೇನೆ. ನೀನು ಸ್ವಲ್ಪ ಅಡ್ಜಸ್ಟ್ ಮಾಡ್ಕೋಬೇಕು. ಬಲವಂತವೇನೂ ಇಲ್ಲ' ಎಂದ. ರಾಧಾಳಿಗೆ ಅವನ ಮಾತು ಅರ್ಥವಾಯಿತು.

1. ಮೇಲಧಿಕಾರಿಯ ನಡತೆಯಿಂದ ರಾಧಾಳ ಮೇಲಾದ ಪರಿಣಾಮವೇನು?
2. ಅವಳಿಗೆ ಕಾನೂನಿನಿಂದ ಪರಿಹಾರವಿದೆಯೇ? ಇದ್ದರೆ ಹೇಳಿ.

## ಪ್ರಕರಣ 2

ರೇಖಾ 24 ವರ್ಷದ ಯುವತಿ. ಪದವೀಧರೆ. ಜಾಣೆ. ಕಪ್ಪು ಮೈಬಣ್ಣ, ದಪ್ಪಗಿದ್ದ ರೇಖಾ ಪದವಿ ಮುಗಿಸಿದ ನಂತರ ಸರ್ಕಾರಿ ಇಲಾಖೆಯಲ್ಲಿ ಕೆಲಸ ಮಾಡುತ್ತಿದ್ದಳು. ತುಂಬ ಒಳ್ಳೆಯ ಕೆಲಸಗಾರ್ತಿ. ಆದರೆ ಅವಳ ಮೈ ಬಣ್ಣ ಮತ್ತು ದಪ್ಪಗಿದ್ದ ಕಾರಣಕ್ಕೆ ಅಫೀಸಲ್ಲಿ ಪುರುಷ ಸಹೋದ್ಯೋಗಿಗಳ ಅಪಹಾಸ್ಯಕ್ಕೆ ಗುರಿಯಾಗಿದ್ದಳು. ಏನು ಊಟ ಮಾಡ್ತೀರಿ? ಇಷ್ಟು ಸೊಂಪಾಗಿದ್ದೀರಿ? ಯಾವ ಕ್ರೀಂ ಹಚ್ತೀರಿ? ಮೊದಲಾದ ಮಾತುಗಳಿಂದ ನೋಯಿಸುತ್ತಿದ್ದರು. ಇದರಿಂದ ರೇಖಾಗೆ ನೋವಾಗುತ್ತಿತ್ತು. ಏನೂ ಹೇಳದೆ ಸುಮ್ಮನಾಗಿ ಬಿಡುತ್ತಿದ್ದಳು. ಏನಾದರೂ ಹೇಳಿದರೆ ಅದಕ್ಕೆ ಇನ್ನಷ್ಟು ತಮಾಷೆ ಮಾಡಿ ಅವಮಾನ ಮಾಡುತ್ತಿದ್ದರು. ಸಹೋದ್ಯೋಗಿ ಗೆಳತಿಯೊಬ್ಬಳು ಅವಳಿಗೆ ಧೈರ್ಯ ಹೇಳಿ, ನೀನು ಯಾಕೆ ಸುಮ್ಮನಿರುತ್ತೀ? ದೂರು ಸಮಿತಿಗೆ ದೂರು ಕೊಡು ಎಂದು ಸಲಹೆ ಕೊಟ್ಟಳು.

1. ರೇಖಾ ಗೆಳತಿಯ ಸಲಹೆಯಂತೆ ದೂರು ಸಮಿತಿಗೆ ದೂರು ಕೊಡಬಹುದೇ?
2. ಕೆಲಸದ ಸ್ಥಳದಲ್ಲಿ ಲೈಂಗಿಕ ಕಿರುಕುಳ ಕಾಯ್ದೆಯಡಿಯಲ್ಲಿ ರೇಖಾಳ ಸಮಸ್ಯೆಗೆ ಪರಿಹಾರ ದೊರೆಯುವುದೇ?

**ಮೌಲ್ಯಮಾಪನ**

1. ಹತ್ತು ಮಂದಿ ಉದ್ಯೋಗಿಗಳಿಗಿಂತ ಕಡಿಮೆ ಇರುವ ಸಂಸ್ಥೆಯಲ್ಲಿ ಆಂತರಿಕ ಸಮಿತಿ ರಚಿಸಬೇಕು. (ತಪ್ಪು)
2. ದಿನಗೂಲಿ ಮಾಡುವ ಮಹಿಳೆಯರು ಆಂತರಿಕ ಸಮಿತಿಗೆ ದೂರು ನೀಡಬಹುದು. (ತಪ್ಪು)
3. ಸಮಿತಿ ಸದಸ್ಯರು ವಿಚಾರಣಾ ಪ್ರಕ್ರಿಯೆಯನ್ನು ಮತ್ತು ಶಿಫಾರಸ್ಸನ್ನು ಗೌಪ್ಯವಾಗಿಡಬೇಕು. (ಸರಿ)
4. ದೂರು ಪೆಟ್ಟಿಗೆಯನ್ನು ಎಲ್ಲರಿಗೂ ಕಾಣುವಂತೆ ಇಡಬೇಕಾಗಿಲ್ಲ. (ತಪ್ಪು)
5. ಖಾಸಗಿ ಸಂಸ್ಥೆಗಳಲ್ಲಿ ದೂರು ಸಮಿತಿಯ ರಚನೆಯ ಅವಶ್ಯಕತೆಯಿಲ್ಲ. (ತಪ್ಪು)
6. ಪ್ರಕರಣದ ವಿಚಾರಣಾ ಸಮಯದಲ್ಲಿ ಮಹಿಳೆಯರಿಗೆ ಮೂರು ತಿಂಗಳು ವೇತನಸಹಿತ ರಜೆಯನ್ನು ನೀಡಬೇಕು. (ಸರಿ)
7. ಸಮಿತಿಯು 5 ವರ್ಷಗಳಿಗೊಮ್ಮೆ ಬದಲಾಗಬೇಕು. (ತಪ್ಪು)
8. ಆಪಾದಿತನು ಆ ಸಂಸ್ಥೆಯ ಉದ್ಯೋಗಿಯಾಗಿರದಿದ್ದರೆ ಆತನ ಮೇಲೆ ಕಾನೂನು ಕ್ರಮ ಕೈಗೊಳ್ಳುವ ಅಗತ್ಯವಿಲ್ಲ. (ತಪ್ಪು)
9. ತಪ್ಪಿತಸ್ಥನ ಸಂಬಳದಿಂದ ಬಾಧಿತ ಮಹಿಳೆಯರಿಗೆ ಪರಿಹಾರ ನೀಡಲು ಸಾಧ್ಯವಿಲ್ಲ. (ತಪ್ಪು)
10. ದೂರು ಸಮಿತಿಯು ದೂರಿನ ಒಂದು ಪ್ರತಿಯನ್ನು ಆಪಾದಿತನಿಗೆ ಒಂದು ತಿಂಗಳೊಳಗೆ ಕಳುಹಿಸಿಕೊಡಬೇಕು. (ತಪ್ಪು)

# ಆಸ್ತಿ ಹಕ್ಕು

**ಪ್ರಸ್ತಾವನೆ**

ಆಸ್ತಿ, ವಿದ್ಯೆ ಮತ್ತು ಅದರೊಟ್ಟಿಗೆ ಬೇಕಾದಂತಹ ಆತ್ಮವಿಶ್ವಾಸ ಇವು ಮೂರೂ ಒಟ್ಟಿಗೆ ಸೇರಿದಾಗ ಯಾರೂ ಬೇಕಾದರೂ ತನ್ನ ಮೇಲೆ ನಿಯಂತ್ರಣ ಹೊಂದಬಲ್ಲರು. ನಮ್ಮ ಈ ಪುರುಷ ಪ್ರಧಾನ ಸಮಾಜ, ಹೆಣ್ಣನ್ನು ತನ್ನ ಅಡಿಯಾಳನ್ನಾಗಿ ಇಟ್ಟುಕೊಳ್ಳಲು ಈ ಮೂರೂ ವಿಷಯಗಳನ್ನು ಅವಳಿಂದ ಕಸಿದುಕೊಂಡಿತು. 1956ರಲ್ಲಿ ಜಾರಿಗೆ ಬಂದ 'ಹಿಂದೂ ಆಸ್ತಿ ಹಕ್ಕು ಕಾಯ್ದೆ' ಹಿಂದೂ ಮಹಿಳೆಗೆ ತಮ್ಮ ಸ್ತ್ರೀಧನದ ಮೇಲೆ ಸಂಪೂರ್ಣ ಅಧಿಕಾರವನ್ನು ಮತ್ತು ತಂದೆತಾಯಿಯರ ಸ್ವಂತ ಆಸ್ತಿಯಲ್ಲಿ ಹೆಣ್ಣು ಮತ್ತು ಗಂಡು ಮಕ್ಕಳಿಗೆ ಸಮಾನ ಆಸ್ತಿಯನ್ನು ನೀಡಿತು. ಇದರ ನಂತರ 90ರ ದಶಕದಲ್ಲಿ ಕರ್ನಾಟಕ ಸೇರಿದಂತೆ ದಕ್ಷಿಣ ಭಾರತದ ನಾಲ್ಕು ರಾಜ್ಯಗಳಲ್ಲಿ ಹೆಣ್ಣು ಮಕ್ಕಳಿಗೆ ಕುಟುಂಬದ ಆಸ್ತಿಯಲ್ಲಿ ಸಮಾನ ಅಧಿಕಾರ ಪ್ರಾಪ್ತವಾಯಿತು. 2005ರಲ್ಲಿ ಹಿಂದೂ ಆಸ್ತಿ ಹಕ್ಕಿಗೆ ತಿದ್ದುಪಡಿಯಾಗಿ ಇಡೀ ದೇಶದಲ್ಲಿ ಹೆಣ್ಣು ಮತ್ತು ಗಂಡುಮಕ್ಕಳಿಗೆ ಸಮಾನ ರೀತಿಯ ಹಕ್ಕು ಲಭಿಸಿತು. ಆಸ್ತಿ ಹಕ್ಕಿನ ಕಾನೂನು ವೈಯಕ್ತಿಕ ಕಾನೂನಿನ ಪರಿಧಿಯೊಳಗೆ ಬರುವುದರಿಂದ ಅದು ಬೇರೆ ಬೇರೆ ಧರ್ಮದವರಿಗೆ ಬೇರೆ ಬೇರೆಯಾಗಿದೆ.

**ಆಸ್ತಿ ಎಂದರೆ ಏನು?**

ಕಾನೂನಿನ ಆಸ್ತಿಯಲ್ಲಿ ಎರಡು ಬಗೆ ಇದೆ.

**1. ಚರ ಆಸ್ತಿ**

ಅಂದರೆ ಆಸ್ತಿಯನ್ನು ಒಂದು ಕಡೆಯಿಂದ ಇನ್ನೊಂದು ಕಡೆಗೆ ತೆಗೆದುಕೊಂಡು ಹೋಗಲು ಸಾಧ್ಯವಾಗುವಂತಹದು.

ಉದಾ: ಬಂಗಾರ, ಬೆಳ್ಳಿ, ಪಾತ್ರೆಗಳು, ವಾಹನಗಳು, ಹಣ, ಪಾಲಿಸಿಗಳು, ಬ್ಯಾಂಕ್‌ಖಾತೆ, ಮ್ಯೂಚುವಲ್ ಫಂಡ್, ಶೇರ್ ಇತ್ಯಾದಿ.

**2. ಸ್ಥಿರ ಆಸ್ತಿ**

ಅಂದರೆ ಭೂಮಿಗೆ ತಾಗಿಕೊಂಡು ಇರುವಂತಹದು. ಮನೆ, ಭೂಮಿ, ಕಟ್ಟಡಗಳು, ಕತ್ತರಿಸದೇ ಇರುವ ಬೆಳೆ, ಮರಗಳು ಇತ್ಯಾದಿ.

**ಆಸ್ತಿ ಪಡೆಯುವ ವಿಧಾನ**

ಆಸ್ತಿಯನ್ನು ಮೂರು ವಿಧದಲ್ಲಿ ಪಡೆಯಬಹುದು.

1 ಸ್ವಂತ ಆಸ್ತಿ

2 ಪಿತ್ರಾರ್ಜಿತ ಆಸ್ತಿ (ಕೌಟುಂಬಿಕ ಆಸ್ತಿ)

3 ಸರಕಾರದಿಂದ ಮಂಜೂರು ಆದ ಆಸ್ತಿ

**ಸ್ವಂತ ಆಸ್ತಿ**

ವ್ಯಕ್ತಿ ತನ್ನ ಹಣದಿಂದ ಸಂಪಾದಿಸಿದ ವಸ್ತುಗಳು ಯಾ ಭೂಮಿ.

ಸ್ವಂತ ಆಸ್ತಿಯನ್ನು ವ್ಯಕ್ತಿ ತನಗೆ ಬೇಕಾದ ರೀತಿಯಲ್ಲಿ ಅನುಭವಿಸಿಕೊಂಡು ಬರಬಹುದು. ತನ್ನ ಜೀವಿತಾವಧಿಯಲ್ಲಿ ಹಾಗೂ ಜೀವಿತದ ನಂತರ ಯಾರಿಗೆ ಬೇಕಾದರೂ ಕೊಡಬಹುದು.

**ಪಿತ್ರಾರ್ಜಿತ ಆಸ್ತಿ (ಕೌಟುಂಬಿಕ ಆಸ್ತಿ)**

ಅಜ್ಜ, ಅಜ್ಜಿ ಅಥವಾ ಕುಟುಂಬದ ಆಸ್ತಿ :-

ಹಿಂದೂಗಳಲ್ಲಿ ಪಿತ್ರಾರ್ಜಿತ ಆಸ್ತಿ ಒಂದು ಕುಟುಂಬಕ್ಕೆ ಸೇರಿದ ಆಸ್ತಿಯಾದ ಕಾರಣ ಈ ಕುಟುಂಬದ ಎಲ್ಲಾ ಸದಸ್ಯರು ಜತೆಯಾಗಿ ಅದರ ಮಾಲೀಕರಾಗಿರುತ್ತಾರೆ. ಕುಟುಂಬದ ಹಿರಿಯ ಸದಸ್ಯರು ಆಸ್ತಿಯ ನಿರ್ವಹಣೆ ಅಧಿಕಾರವನ್ನು ಹೊಂದಿದವರಾಗಿರುತ್ತಾರೆ. ಕುಟುಂಬದಲ್ಲಿನ ಚಿಕ್ಕ ಮಕ್ಕಳಿಗೂ ದೊಡ್ಡವರಷ್ಟೇ ಹಕ್ಕು ಇರುತ್ತದೆ.

**ಸರ್ಕಾರದಿಂದ ಮಂಜೂರು ಆದ ಆಸ್ತಿ**

ಉದಾಹರಣೆಗೆ, ಆಶ್ರಯ ಮನೆ, ಮಂಜೂರು ಆದ ಜಾಗಗಳು, ಭೂ ಸುಧಾರಣಾ ಕಾಯ್ದೆಯ ಮೂಲಕ ಪಡೆದ ಭೂಮಿ ಇತ್ಯಾದಿ. ಸರಕಾರದಿಂದ ಪಡೆದ ಆಸ್ತಿಗೆ ಸರಕಾರ ಕೆಲವು ನಿಯಮಗಳನ್ನು ವಿಧಿಸಿರುತ್ತದೆ. ಆ ಪ್ರಕಾರವೇ ಆಸ್ತಿಯನ್ನು ಅನುಭವಿಸಿಕೊಂಡು ಬರಬೇಕು. ಅವಧಿ ಕಳೆದ ನಂತರವೇ ಅದು ಆತನ/ ಆಕೆಯ ಸ್ವಂತ ಆಸ್ತಿ ಆಗುತ್ತದೆ.

ಉದಾ: ಆಶ್ರಯ ಯೋಜನೆ, ಭೂ ಸುಧಾರಣಾ ಕಾಯ್ದೆಯಡಿ 15 ವರ್ಷ ಸದರಿ ಜಮೀನನ್ನು ಮಾರುವ/ ಪರಭಾರೆ ಮಾಡುವ ಹಕ್ಕಿರುವುದಿಲ್ಲ.

ಹೀಗೆ ಬೇರೆ ಬೇರೆ ಅವಧಿಯ ನಿಯಮ ಆಯಾ ಯೋಜನೆಗೆ ತಕ್ಕಂತೆ ಇರುತ್ತದೆ.

**ಉತ್ತರಾಧಿಕಾರ**

ಒಬ್ಬ ವ್ಯಕ್ತಿ ಮೃತ ಪಟ್ಟಾಗ ಆತನ ನಂತರ ಆತನಿಗೆ ಸಂಬಂಧಪಟ್ಟ ಆಸ್ತಿ ಯಾರ್‍ಯಾರಿಗೆ ಹೋಗಬೇಕೆಂದು ತಿಳಿಸುವ, ಆ ಆಸ್ತಿಗೆ ಯಾರು ಹಕ್ಕುದಾರರು ಮತ್ತು ಯಾರ್‍ಯಾರಿಗೆ ಎಷ್ಟೆಷ್ಟು ಪಾಲು ಎಂದು ತಿಳಿಸುವುದೇ ಉತ್ತರಾಧಿಕಾರ.

ಉದಾ: ನಂಜಪ್ಪನಿಗೆ ಆತನ ತಂದೆಯಿಂದ ಬಂದ 8 ಎಕರೆ ಜಮೀನು, ತಾನು ಸ್ವಂತ ಗಳಿಸಿದ 4 ಎಕರೆ ಜಮೀನು, ಒಟ್ಟು 12 ಎಕರೆ ಜಮೀನಿದೆ. ನಂಜಪ್ಪ ಮೃತಪಟ್ಟಿದ್ದು, ಆತನ ತಾಯಿ, ಹೆಂಡತಿ, ಎರಡು ಜನ ಗಂಡು ಹಾಗೂ ಎರಡು ಜನ ಹೆಣ್ಣುಮಕ್ಕಳಿದ್ದು, ಹಿರಿಯ ಮಗ ಈಗಾಗಲೇ ತೀರಿಕೊಂಡಿದ್ದಾನೆ. ಅವನಿಗೂ ಇಬ್ಬರು ಮಕ್ಕಳಿದ್ದಾರೆ. ಮಕ್ಕಳು ನಂಜಪ್ಪನ ಆಸ್ತಿಯಲ್ಲಿ ಭಾಗ ಮಾಡಿಕೊಳ್ಳಲು ನಿಶ್ಚಯಿಸಿದ್ದಾರೆ. ಭಾಗ ಹೇಗೆ? ಯಾರಿಗೆಲ್ಲಾ ಪಾಲಿದೆ? ಎಷ್ಟೆಷ್ಟು? ಎನ್ನುವುದನ್ನು ನೋಡೋಣ.

**ಒಟ್ಟು ಆಸ್ತಿ 12 ಎಕರೆ**



ಕಾನೂನಿನಂತೆ ಎಲ್ಲರಿಗೂ ಸಮಾನ ಪಾಲು ಇದ್ದು, ತಾಯಿ, ಹೆಂಡತಿ, ಎರಡನೇ ಮಗ, ಮೂರನೇ ಮಗಳು, ನಾಲ್ಕನೇ ಮಗಳಿಗೆ ತಲಾ 2 ಎಕರೆ, ಮೃತ ಒಂದನೇ ಮಗನ ಪಾಲು 2 ಎಕರೆಯಲ್ಲಿ ಆತನ ತಾಯಿ, ಹೆಂಡತಿ ಮತ್ತು ಮಕ್ಕಳಿಗೆ ಸಮಾನ ಪಾಲು ಸಿಗುತ್ತದೆ. (ಅಂದರೆ ತಲಾ 50 ಸೆಂಟ್ಸ್ ಜಾಗ) ಮೃತ ಮಗನ ಪಾಲಿನಲ್ಲಿ ತಾಯಿಗೂ ಪಾಲಿದ್ದು ಅದರಿಂದ ತಾಯಿಗೆ 50 ಸೆಂಟ್ಸ್ ಜಾಗ ಸಿಗುತ್ತದೆ.

**ಹಿಂದೂಗಳಲ್ಲಿ ಆಸ್ತಿ ಹಕ್ಕು ಮತ್ತು ವಾರಸಾ ಕಾನೂನು**

- ಪಿತ್ರಾರ್ಜಿತ ಆಸ್ತಿಯನ್ನು ಮುಖ್ಯಸ್ಥನ ಜೀವಿತದಲ್ಲೇ ಪಾಲು ಮಾಡಬಹುದು.
- ಪಿತ್ರಾರ್ಜಿತ ಆಸ್ತಿಯಲ್ಲಿ ಪಾಲುದಾರರು ('ಕೋ ಪಾರ್ಟನರ್') ಎಂದರೆ ಆ ಮುಖ್ಯಸ್ಥ ಹಾಗೂ ಆತನ ಎಲ್ಲಾ ಮಕ್ಕಳು. ಇವರೆಲ್ಲರಿಗೂ ಪಿತ್ರಾರ್ಜಿತ ಆಸ್ತಿಯಲ್ಲಿ ಸಮಪಾಲಿದೆ. ಮುಖ್ಯಸ್ಥನ ಹೆಂಡತಿಗೆ ಯಾವ ಪಾಲೂ ಇರುವುದಿಲ್ಲ.
- ಹೀಗೆ ಪಿತ್ರಾರ್ಜಿತ ಆಸ್ತಿಯನ್ನು ಮುಖ್ಯಸ್ಥನ ಜೀವಿತದಲ್ಲೇ ಪಾಲು ಮಾಡಿದರೆ, ಆತನಗೆ ಬರುವ ಪಾಲು ಆತನ ಸ್ವಂತ ಆಸ್ತಿಯಂತೆ, ಆತನ ಸಂಪೂರ್ಣ ಮಾಲಿಕತ್ವ ಹೊಂದಿದ್ದಾಗಿರುತ್ತದೆ.
- ಪಿತ್ರಾರ್ಜಿತ ಆಸ್ತಿಯಲ್ಲಿ ಮುಖ್ಯಸ್ಥನಿಗೆ ಬರುವ ಪಾಲನ್ನು ಆತನು ಯಾರಿಗೂ ವಿಲ್ ಮಾಡದಿದ್ದರೆ, ಆತನ ಮರಣದ ನಂತರ, ಅದು ಆತನ ವಾರಸುದಾರರಿಗೆ ಸಮಪಾಲಾಗಿ ಹೋಗುತ್ತದೆ. ವಾರಸುದಾರರು ಎಂದರೆ ಮಗ, ಮಗಳು, ವಿಧವೆ ಹೆಂಡತಿ ಹಾಗೂ ತಾಯಿ.
- ಮುಖ್ಯಸ್ಥನ ಜೀವಿತದಲ್ಲಿ ಪಿತ್ರಾರ್ಜಿತ ಆಸ್ತಿಯನ್ನು ಪಾಲು ಮಾಡದಿದ್ದರೆ, ಆತನ ಮರಣದ ನಂತರ, ಅದರ ಪಾಲುದಾರರು ಅದನ್ನು ಪಾಲು ಮಾಡಿಕೊಳ್ಳಬಹುದು ಅಥವಾ ಹಾಗೇ ಮುಂದುವರಿಸಬಹುದು. ಪಾಲು ಮಾಡಿದರೆ, ಮೇಲೆ ಹೇಳಿದಂತೆ ಆಗುತ್ತದೆ. ಮೊದಲು ಪಾಲುದಾರರಾದ ಮುಖ್ಯಸ್ಥ ಮತ್ತು ಅವನ ಮಕ್ಕಳಿಗೆ ಸಮಭಾಗಗಳು. ನಂತರ, ಮುಖ್ಯಸ್ಥನ ಭಾಗದಲ್ಲಿ ಅವನ ವಾರಸುದಾರರಾದ ಹೆಂಡತಿ, ತಾಯಿ, ಮಕ್ಕಳಲ್ಲಿ ಸಮ ಭಾಗಗಳು.
- ಸ್ವಯಾರ್ಜಿತ ಆಸ್ತಿಯನ್ನು ಒಬ್ಬ ವ್ಯಕ್ತಿ (ಗಂಡು/ಹೆಣ್ಣು) ಯಾರಿಗೆ ಬೇಕಾದರೂ ಮಾರಬಹುದು, ದಾನ ಮಾಡಬಹುದು ಅಥವಾ ವಿಲ್ ಬರೆದಿಡಬಹದು.
- ಹಾಗೆ ಯಾವುದೂ ಮಾಡದಿದ್ದಲ್ಲಿ ಆ ಸ್ವಯಾರ್ಜಿತ ಆಸ್ತಿ ಆತನ ವಾರಸುದಾರರಿಗೆ ಸಮ ಭಾಗವಾಗಿ ಹೋಗುತ್ತದೆ.
- ಮಕ್ಕಳಲ್ಲಿ ಯಾರಾದರೂ ಮೊದಲೇ ತೀರಿಹೋಗಿ ಅವರ ಹೆಂಡತಿ (ಗಂಡ) ಮಕ್ಕಳು ಬದುಕಿದ್ದರೆ, ತೀರಿಹೋಗಿರುವ ಮಗನಗೆ (ಮಗಳಿಗೆ) ಸಿಗಬೇಕಿದ್ದ ಪಾಲು ಅವರ ಹೆಂಡತಿ (ಗಂಡ) ಮಕ್ಕಳಲ್ಲಿ ಸಮಪಾಲಾಗುತ್ತದೆ.

**ಮಹಿಳೆಯರಿಗೆ ಆಸ್ತಿಯ ವಾರಸಾ ಹಕ್ಕು**

- ಒಬ್ಬ ಪುರುಷನ ವಾರಸುದಾರರೆಂದರೆ ಆತನ ವಿಧವೆ ಹೆಂಡತಿ, ಮಕ್ಕಳು ಮತ್ತು ತಾಯಿ. ಆದರೆ ಒಬ್ಬ ಮಹಿಳೆಯ ವಾರಸುದಾರರೆಂದರೆ ಆಕೆಯ ವಿಧುರ ಗಂಡ ಮತ್ತು ಮಕ್ಕಳು ಮಾತ್ರ. ಹಾಗಾಗಿ :
- ಒಬ್ಬ ಮಹಿಳೆಯು ತಾನೇ ತನ್ನ ಸ್ವಂತ ದುಡಿಮೆಯಿಂದ ಗಳಿಸಿದ ಆಸ್ತಿ ಅವಳ ಮರಣಾನಂತರ ಆಕೆ ವಿಲ್ ಬರೆದಿಡದಿದ್ದಲ್ಲಿ ಆಕೆಯ ವಾರಸುದಾರರಾದ ಗಂಡ, ಮಕ್ಕಳಿಗೆ ಹೋಗುತ್ತದೆ. ಆಕೆಗೆ ಈ ವಾರಸುದಾರರು ಯಾರೂ ಇರದೇ ಹೋದಲ್ಲಿ ಅದು ಆಕೆಯ ಗಂಡನ ವಾರಸುದಾರರಿಗೆ ಹೋಗುತ್ತದೆ. ಗಂಡನ ವಾರಸುದಾರರು ಇಲ್ಲವಾದಲ್ಲಿ ಆಕೆಯ ತಂದೆ, ತಾಯಿಗೆ ಹೋಗುತ್ತದೆ. ಅವರೂ ಇಲ್ಲವಾದಲ್ಲಿ ಆಕೆಯ ತಂದೆಯ ವಾರಸುದಾರರಿಗೆ ಹೋಗುತ್ತದೆ.
- ಆದರೆ, ಒಬ್ಬ ಮಹಿಳೆಗೆ ಆ ಆಸ್ತಿ ತನ್ನ ಗಂಡನಿಂದ ಬಂದಿದ್ದಾದರೆ ಮತ್ತು ಆಕೆ ಯಾವುದೇ ವಿಲ್ ಬರೆದು ಇಡದಿದ್ದರೆ ಹಾಗೂ ಮಕ್ಕಳು ಇಲ್ಲದಿದ್ದರೆ ಅಂತಹ ಆಸ್ತಿ ಗಂಡನ ವಾರಸುದಾರರಿಗೆ ಹೋಗುತ್ತದೆ. ಮತ್ತು ಆ ಆಸ್ತಿ ತಂದೆಯಿಂದ ಬಂದಿದ್ದು, ಗಂಡ–ಮಕ್ಕಳು ಇಲ್ಲದಿದ್ದರೆ ಆಗ ಆ ಆಸ್ತಿ ತಂದೆಯ ವಾರಸುದಾರರಿಗೆ ಹೋಗುತ್ತದೆ.

- ಹಿಂದೂ ವಾರಸಾ ಕಾನೂನಿನಲ್ಲಿ ಅವಿಭಾಜ್ಯ ಕುಟುಂಬದ ಆಸ್ತಿ ಎಂಬುದಿದೆ. ಅಂದರೆ ಒಂದು ಮನೆಯ ಎಲ್ಲಾ ಸದಸ್ಯರು ಸೇರಿದಂತೆ ಒಂದು ಆಸ್ತಿಗೆ / ವ್ಯಾಪಾರಕ್ಕೆ ಕೆಲಸ ಮಾಡಿದ್ದರೆ, ಆ ಆಸ್ತಿ ಅವರೆಲ್ಲರಿಗೂ ಸೇರಿದ್ದಾಗಿರುತ್ತದೆ. ಅಂತಹ ಆಸ್ತಿಯನ್ನು ಯಾವುದೇ ಒಬ್ಬ ಸದಸ್ಯ ತನಗೆ ಬೇಕಾದಂತೆ ಮಾರಲು/ ವಿಲೇವಾರಿ ಮಾಡಲು ಸಾಧ್ಯವಿಲ್ಲ.
- ಯಾವುದೇ ಒಬ್ಬ ಸದಸ್ಯ ಅಂತಹ ಆಸ್ತಿಗೆ ಹೆಚ್ಚಾಗಿ ದುಡಿದಿದ್ದರೆ ಅಂತಹವರಿಗೆ ಹೆಚ್ಚು ಭಾಗ ಸಿಗುವುದಿಲ್ಲ.
- ಹಾಗೆಯೇ, ಒಬ್ಬ ಸದಸ್ಯ ಬೇರೆ ಯಾವ ಆದಾಯವಿಲ್ಲದೇ, ಒಟ್ಟು ಕುಟುಂಬದ ಆಸ್ತಿಯ ಆದಾಯದಿಂದಲೇ ಇನ್ನಷ್ಟು ಆಸ್ತಿಯನ್ನು ಕೊಂಡುಕೊಂಡಿದ್ದರೆ, ಅಂತಹ ಆಸ್ತಿಯು ಅವನ ಸ್ವಂತದ್ದಾಗದೇ ಅದೂ ಸಹ ಕುಟುಂಬದ ಆಸ್ತಿಯಾಗುತ್ತದೆ. ಅದರಲ್ಲೂ ಹೆಣ್ಣು ಮಕ್ಕಳಿಗೆ ಸಮ ಪಾಲಿದೆ.
- ಆದರೆ ಗಮನಿಸಬೇಕಾದ ಅಂಶವೆಂದರೆ, ಇಲ್ಲಿಯೂ ಹೆಂಡತಿಗೆ ಯಾವುದೇ ಪಾಲಿಲ್ಲ. ಬದಲಿಗೆ-ಆಕೆಯ ಗ್ಗಂಡ ಅಂತಹ ಆಸ್ತಿಯ ತನ್ನ ಭಾಗವನ್ನು ವಿಲ್ ಮಾಡಿಡದೇ ಇದ್ದಲ್ಲಿ ಮಾತ್ರ ಅವನ ಪಾಲಲ್ಲಿ ಒಂದು ಪಾಲು ಅವಳಿಗೆ ಬರುತ್ತದೆ ಅಷ್ಟೇ.
- ದತ್ತು ಮಕ್ಕಳಿಗೆ ಹಿಂದೂ ಆಸ್ತಿ ಕಾಯ್ದೆಯಡಿ ಆಸ್ತಿಯಲ್ಲಿ ಪಾಲಿದೆ.
- ವಿವಾಹೇತರ ಸಂಬಂಧದಿಂದ ಹುಟ್ಟಿದ ಮಕ್ಕಳಿಗೆ ತಂದೆ/ ತಾಯಿಯ ಸ್ವಂತ ಆಸ್ತಿಯಲ್ಲಿ ಪಾಲಿದೆ.
- ವಿಧವೆಯು ಆಸ್ತಿಯಲ್ಲಿ ಪಾಲು ಪಡೆಯಲು ಹಕ್ಕುಳ್ಳ ಸ್ತ್ರೀ. ತನ್ನ ಗಂಡನು ಮರಣ ಹೊಂದಿದ ತಕ್ಷಣದಿಂದ ಉತ್ತರಾಧಿಕಾರದ ಹಕ್ಕನ್ನು ಹೊಂದುತ್ತಾಳೆ. ಒಮ್ಮೆ ಆಸ್ತಿ ಆಕೆಯ ಹೆಸರಿಗೆ ಬಂದ ನಂತರ ಆಕೆ ಮರು ವಿವಾಹವಾದಲ್ಲಿ ಈ ಮೊದಲು ಆಕೆ ತಾನು ಪಡೆದ ಆಸ್ತಿಯನ್ನು ಕಳೆದುಕೊಳ್ಳುವುದಿಲ್ಲ.

**ಮುಸಲ್ಮಾನರಲ್ಲಿ ಆಸ್ತಿ ಹಕ್ಕು ಮತ್ತು ವಾರಸಾ ಕಾನೂನು**

- ವಾರಸುದಾರಿಕೆ ವಿಷಯಗಳಿಗೆ ಸಂಬಂಧಿಸಿದಂತೆ ಮುಸ್ಲಿಮರಿಗೆ ಶರಿಯತ್ ಆಧಾರಿತ ಮುಸ್ಲಿಮ್ ವೈಯಕ್ತಿಕ ಕಾನೂನು ಅನ್ವಯ ಆಗುತ್ತದೆ.
- ಇಲ್ಲಿ ಆಸ್ತಿ ಎಂದರೆ, ಸ್ಥಿರ ಮತ್ತು ಚರ ಎರಡೂ. ಸ್ಥಿರ ಆಸ್ತಿ ಎಂದರೆ– ಜಾಗ, ಹೊಲ, ಮನೆ, ಸೈಟು ಇತ್ಯಾದಿ. ಚರ ಎಂದರೆ–ಸಾಮಾನು, ಸಲಕರಣೆ, ಪೀಠೋಪಕರಣ, ಒಡವೆ, ಇತರೆ ಮನೆಯ ವಸ್ತುಗಳು ಇವೆಲ್ಲ.
- ಮೃತ ವ್ಯಕ್ತಿಯ ಆಸ್ತಿಯಲ್ಲಿ ಮೊದಲು ಅವರ ಅಂತ್ಯಕ್ರಿಯೆಗೆ ತಗಲುವ ವೆಚ್ಚಗಳು, ಅವರಿಗೆ ಸಂಬಂಧಿಸಿದ ಇನ್ಯಾವುದೇ ಉಳಿದ ಖರ್ಚುಗಳು, ಅವರು ತೀರಿಸಬೇಕಿದ್ದ ಸಣ್ಣ ಮೊತ್ತಗಳಿದ್ದರೆ ಅದನ್ನು ತೀರಿಸಬೇಕು, ನಂತರ ಪಾಲಾಗುವುದು.
- ಈ ಖರ್ಚು ವೆಚ್ಚಗಳನ್ನು ತೀರಿಸಿದ ಮೇಲೆ ಉಳಿದ ಆಸ್ತಿಯಲ್ಲಿ ಅವರ ವಿಲ್ ಇದ್ದರೆ ಅದರ ಪ್ರಕಾರ 1:3 ಆಸ್ತಿ ವಿಲೇವಾರಿ ಮಾಡಿ, ಉಳಿಯುವ ಆಸ್ತಿಯಲ್ಲಿ ವಾರಸುದಾರರಿಗೆ ಪಾಲು ಮಾಡಬೇಕು.
- ವಾರಸುದಾರರು ಎಲ್ಲರೂ ತಮ್ಮ ಪಾಲಿಗೆ ಬರುವ ಆಸ್ತಿಯ ಪ್ರಮಾಣದ ಮೇರೆಗೆ ಮೃತರ ಸಾಲದ ಹೊಣೆಯನ್ನೂ ಹೊರಬೇಕಾಗಿದೆ.



**ಪಾಲಿನ ಬಗ್ಗೆ ಕೆಲವು ಮುಖ್ಯ ವಿಷಯಗಳು**

- ಹೆಂಡತಿಗೆ ಗಂಡನ ಆಸ್ತಿಯಲ್ಲಿ 1/8 ಭಾಗ. ಒಬ್ಬರಿಗಿಂತ ಹೆಚ್ಚು ಹೆಂಡತಿಯರಿದ್ದಲ್ಲಿ ಎಲ್ಲರೂ ಆ 1/8 ಭಾಗದಲ್ಲಿ ಸಮ ಪಾಲನ್ನು ಪಡೆಯುತ್ತಾರೆ.
- ಗಂಡನಿಗೆ ಹೆಂಡತಿಯ ಆಸ್ತಿಯಲ್ಲಿ 1/4 ಭಾಗ.
- ತಂದೆಗೆ/ ತಾಯಿಗೆ ಮಕ್ಕಳ ಆಸ್ತಿಯಲ್ಲಿ 1/6 ಭಾಗ.
- ಮಗಳಿಗೆ ಅವಳ ತಂದೆ/ ತಾಯಿಯ ಆಸ್ತಿಯಲ್ಲಿ, ಅವಳ ಸಹೋದರನಗೆ ಸಿಗುವ ಅರ್ಧಪಾಲು, ಸಹೋದರರಿಲ್ಲದಿದ್ದರೆ ಇಡೀ ಆಸ್ತಿಯಲ್ಲಿ ಅರ್ಧ ಪಾಲು ಸಿಗುತ್ತದೆ.
- ಒಬ್ಬ ವ್ಯಕ್ತಿಯ ಮಗ ತೀರಿ ಹೋಗಿದ್ದು, ಬೇರೆ ಮಕ್ಕಳೂ ಇಲ್ಲದಿದ್ದು, ಆ ತೀರಿಹೋದ ಮಗನ ಮಗ ಮತ್ತು ಮಗಳು ಬದುಕಿದ್ದರೆ, ಆ ವ್ಯಕ್ತಿಯ ಆಸ್ತಿಯಲ್ಲಿ 2/3 ಭಾಗ ಆ ಮಗನ ಮಗನಿಗೂ, 1/3 ಭಾಗ ಆ ಮಗನ ಮಗಳಿಗೂ ಹೋಗುತ್ತದೆ.
- ವ್ಯಕ್ತಿಯ ಮಗ ತೀರಿಹೋಗಿ, ಒಬ್ಬ ಮಗಳೂ ಇದ್ದು, ಮೃತ ಮಗನ ಮಗನೂ ಒಬ್ಬ ಮಗಳೂ ಬದುಕಿದ್ದರೆ, ಆತನ ಮಗಳಿಗೆ 1/2 ಭಾಗ, ಉಳಿದರ್ಧದಲ್ಲಿ ಮಗನ ಮಗನಿಗೆ 2/3 ಮತ್ತು ಮಗನ ಮಗಳಿಗೆ 1/3 ಭಾಗ ಹೋಗುತ್ತದೆ. ಗಮನಿಸಿ–ಫಾತಿಮಾಳಿಗೆ ಅಣ್ಣ ತಮ್ಮಂದಿರು ಯಾರಾದರೂ ಇದ್ದಿದ್ದರೆ, ಅವರ ಅಜ್ಜನ ಆಸ್ತಿಯಲ್ಲಿ ಪಾಲು ಹೀಗೆ ಆಗುತ್ತಿತ್ತು.
- ಮುಸಲ್ಮಾನರಲ್ಲಿ ಮಕ್ಕಳನ್ನು ದತ್ತು ತೆಗೆದುಕೊಳ್ಳುವುದನ್ನು ಕಾನೂನು ಗುರುತಿಸುವುದಿಲ್ಲ. ಹಾಗಾಗಿ ಯಾವುದೇ ಮಗುವನ್ನು ನೋಡಿಕೊಳ್ಳಲು ಮನೆಯಲ್ಲಿ ಸ್ವಂತ ಮಗುವಂತೆ ಇಟ್ಟುಕೊಂಡರೂ ಆ ಮಗುವಿಗೆ ವಾರಸಾ ಹಕ್ಕಿರುವುದಿಲ್ಲ.

**ಉದಾಹರಣೆಗೆ**

ಫಾತಿಮಾಳ ತಂದೆ ಹತ್ತು ವರ್ಷದ ಹಿಂದೆ ತೀರಿಕೊಂಡರು. ಆಕೆಯ ಅಜ್ಜನ ಬಳಿಯಲ್ಲಿ 15 ಎಕರೆ ಆಸ್ತಿ ಇದೆ. ಅವಳ ಅಜ್ಜನಿಗೆ ಇವಳ ತಂದೆಯಲ್ಲದೇ ಇನ್ನೊಬ್ಬ ಮಗನಿದ್ದಾನೆ ಮತ್ತು ಒಬ್ಬಳು ಮಗಳು. ಫಾತಿಮಾಳು ಅವಳ ತಾಯಿ, ನಝೀರಾ ಬಾನುವೊಂದಿಗೆ ಅಬ್ದುಲ್ ಶಕೀರರ ಬಳಿ ಬಂದು ತನ್ನ ಮಾವನ ಆಸ್ತಿಯಲ್ಲಿ ತನಗೆ ಯಾ ತನ್ನ ಮಗಳಿಗೆ ಏನಾದರೂ ಪಾಲಿದೆಯೇ ಎಂದು ಕೇಳುತ್ತಾಳೆ.

**ಉತ್ತರ**

ನಿಮ್ಮ ಮಾವನವರ ಆಸ್ತಿಯಲ್ಲಿ ಅವರ ತಂದೆಯವರಿಗೆ 1/6 ಭಾಗ ಹೋಗುತ್ತದೆ. ಉಳಿದ ಆಸ್ತಿಯಲ್ಲಿ 2/3 ಅವರ ಇನ್ನೊಬ್ಬ ಮಗ, ಅಂದರೆ ನಿಮ್ಮ ಮೈದುನನಿಗೆ ಮತ್ತು 1/3 ಭಾಗ ನಿಮ್ಮ ಗಂಡನ ತಂಗಿಗೆ ಹೋಗುತ್ತದೆ. ನಿಮಗೆ ಯಾ ನಿಮ್ಮ ಮಗಳಿಗೆ ಯಾವ ಪಾಲೂ ಬರುವುದಿಲ್ಲ. ಅವರ ಆಸ್ತಿಯಲ್ಲಿ ಅವರ ತಂದೆಗೆ, ಅಜ್ಜನಿಗೂ ಪಾಲಿದೆ–ಅವರು ಬದುಕಿದ್ದಿದ್ದರೆ. ಆದರೆ ಅವರ ಮಗಳಿರುವ ಕಾರಣ ಹಾಗೂ ನಿಮಗೆ ಮಗನಿರದ ಕಾರಣ ನಿಮ್ಮ ಮಗಳಿಗೆ ಯಾವ ಪಾಲೂ ಬರುವುದಿಲ್ಲ.

ಫಾತಿಮಾಳ ತಂದೆಗೆ ಬೇರೆ ಅಣ್ಣ ತಮ್ಮಂದಿರಿದ್ದು ಯಾವ ಅಕ್ಕತಂಗಿಯರೂ ಇರದಿದ್ದರೆ, ಆಗ ಅವಳಿಗೆ ಅವಳ ಅಜ್ಜನ ಆಸ್ತಿಯಲ್ಲಿ ಪಾಲು ಇರುತ್ತಿತ್ತು. ಎಷ್ಟು ಪಾಲು ಎಂಬುದು ಸನ್ನಿವೇಶಕ್ಕೆ ಸಂಬಂಧಿಸಿದ್ದು, ಉದಾಹರಣೆಗೆ ಅವಳ ತಂದೆ ಅವಳ ಅಜ್ಜನ ಒಬ್ಬನೇ ಮಗನಾಗಿದ್ದು ಯಾವ ಅಕ್ಕತಂಗಿಯರೂ ಇಲ್ಲದಿದ್ದಲ್ಲಿ, ಫಾತಿಮಾಳಿಗೆ ಆ ಆಸ್ತಿಯಲ್ಲಿ 1/2 ಪಾಲಿರುತ್ತಿತ್ತು.

## ಕ್ರೈಸ್ತರಿಗೆ ಅನ್ವಯವಾಗುವ ಉತ್ತರಾಧಿಕಾರದ ಕಾನೂನು




ಕ್ರೈಸ್ತರಿಗೆ ಪಿತ್ರಾರ್ಜಿತ ಆಸ್ತಿ ಎಂಬ ಕಲ್ಪನೆ ಇಲ್ಲ. ಒಮ್ಮೆ ಯಾವುದೇ ಮೂಲದಿಂದ ಆಸ್ತಿ ಬಂದರೂ ಅದು ಆತನ ಸ್ವಯಂ ಆಸ್ತಿ ಆಗುತ್ತದೆ.

ಉದಾ: ಪೀಟರ್‌ಗೆ 10 ಎಕರೆ ಜಮೀನಿದೆ. ಅವನಿಗೆ ತಂದೆ, ತಾಯಿ, ಹೆಂಡತಿ, ನಾಲ್ಕು ಜನ ಮಕ್ಕಳು, ಎರಡು ಹೆಣ್ಣು ಮತ್ತು ಎರಡು ಗಂಡು ಮಕ್ಕಳಿದ್ದಾರೆ.

ಕ್ರಿಶ್ಚಿಯನ್ನರಲ್ಲಿ ತಂದೆ/ ತಾಯಿ ಇಬ್ಬರಿಗೂ ಮಗನ ಪಾಲಿನಲ್ಲಿ ಯಾವುದೇ ಹಕ್ಕಿರುವುದಿಲ್ಲ. ಆದ್ದರಿಂದ ಪೀಟರ್‌ನ ಆಸ್ತಿ ಹೆಂಡತಿ, ಮಕ್ಕಳಿಗೆ ಪಾಲು ಆಗಬೇಕು.

ಹೆಂಡತಿಗೆ 1/3 ಭಾಗ, ಉಳಿದ 2/3 ಭಾಗ ಹೆಣ್ಣು ಮತ್ತು ಗಂಡು ಮಕ್ಕಳಿಬ್ಬರಿಗೂ ಸಮ ಪಾಲು.

### ಕೊಲೆಗಾರ

ಮೃತ ಹಿಂದೂ ಪುರುಷ ಅಥವಾ ಮಹಿಳೆಯನ್ನು ಆತನ ಆಸ್ತಿಯನ್ನು ಲಪಟಾಯಿಸುವ ಉದ್ದೇಶದಿಂದ ಕೊಲೆ ಮಾಡಿದ್ದಲ್ಲಿ, ಯಾ ಆತನನ್ನು ಅಥವಾ ಆಕೆಯನ್ನು ಕೊಲ್ಲಲು ದುಷ್ಪ್ರೇರಣೆ ನೀಡಿದ್ದಲ್ಲಿ ಅಂತಹ ಮಹಿಳೆ/ ಪುರುಷ ಮೃತ ವ್ಯಕ್ತಿಯ ಆಸ್ತಿಯನ್ನು ಹೊಂದುವ ಅಧಿಕಾರ ಕಳೆದುಕೊಳ್ಳುತ್ತಾರೆ.

### ವಿಚ್ಛೇದನ

ವಿಚ್ಛೇದನ ಹೊಂದಿದ ನಂತರ ಪರಸ್ಪರರು ಗಂಡನ / ಹೆಂಡತಿಯ ಆಸ್ತಿಯ ಮೇಲಿನ ಹಕ್ಕನ್ನು ಕಳೆದುಕೊಳ್ಳುತ್ತಾರೆ.

### ಮತಾಂತರ

ಹಿಂದೂ ಧರ್ಮದವರು ಮತಾಂತರ ಮಾಡಿದ್ದಲ್ಲಿ ಅಂದರೆ ತನ್ನ ಧರ್ಮವನ್ನು ತ್ಯಜಿಸಿ ಬೇರೊಂದು ಧರ್ಮವನ್ನು ಸ್ವೀಕರಿಸಿದ್ದಲ್ಲಿ ಅಂತಹ ವಾರಸುದಾರರು ಹಾಗೂ ಆತನ ವಂಶಜರು ಮೃತ ಹಿಂದೂವಿನ ಆಸ್ತಿಯಲ್ಲಿ ಪಾಲು ಪಡೆಯುವ ಹಕ್ಕನ್ನು ಕಳೆದುಕೊಳ್ಳುತ್ತಾರೆ.

**ವಾಸದ ಹಕ್ಕು**

ಕುಟುಂಬಕ್ಕೆ ಸೇರಿದ ಮನೆಯಲ್ಲಿ 1994ರ ಮೊದಲು ಮದುವೆಯಾದ ಹೆಣ್ಣುಮಕ್ಕಳಿಗೆ ಮನೆಯಲ್ಲಿ ವಾಸ ಮಾಡುವ ಹಕ್ಕಿರಲಿಲ್ಲ. ಆದರೆ 1994ರಲ್ಲಿ ಬಂದ ಕರ್ನಾಟಕ ತಿದ್ದುಪಡಿ ಕಾನೂನು ಪ್ರಕಾರ ಕುಟುಂಬದಲ್ಲಿ ಪುರುಷರು ವಾಸದ ಮನೆಯನ್ನು ಪಾಲು ಮಾಡಿಕೊಳ್ಳುವಾಗ ಹೆಣ್ಣು ಮಕ್ಕಳಿಗೆ ವಾಸದ ಮನೆಯಲ್ಲಿ ಪಾಲು ಕೇಳುವ ಹಕ್ಕಿರಲಿಲ್ಲ. ಆದರೆ ಮನೆಯಲ್ಲಿ ವಾಸ ಮಾಡುವ ಹಕ್ಕು ಇತ್ತು. 2005ರ ತಿದ್ದುಪಡಿ ಕಾನೂನು ಪ್ರಕಾರ ಕುಟುಂಬದ ಆಸ್ತಿಯಲ್ಲಿ ಹೆಣ್ಣು ಮಕ್ಕಳಿಗೂ ಗಂಡು ಮಕ್ಕಳಂತೆ ಸಮಾನ ಪಾಲನ್ನು ನೀಡಿರುವುದಲ್ಲದೆ ಹೆಣ್ಣು ಮಕ್ಕಳನ್ನು ಸಹ ವಾರೀಸುದಾರರನ್ನಾಗಿ ಮಾಡಿದುದರಿಂದ ಕುಟುಂಬದ ವಾಸದ ಮನೆಯ ಹಕ್ಕು ಇಬ್ಬರಿಗೂ ಸಮಾನವಾಗಿ ನೀಡಲ್ಪಟ್ಟಿತು. ಜತೆಗೆ 5–9–2011ರಲ್ಲಿ ಹಿಂದೂ ಸಕ್ಷೆಶನ್ ಕಾಯ್ದೆ 1956ರ ತಿದ್ದುಪಡಿ ಅನ್ವಯ ಗ್ರಾಮೀಣ ಪ್ರದೇಶಗಳಲ್ಲಿ ಎಲಾ ಭೂ ದಾಖಲೆಗಳಲ್ಲಿ ಪತಿ ಮತ್ತು ಪತ್ನಿ ಇಬ್ಬರ ಹೆಸರುಗಳನ್ನು ಕಡ್ಡಾಯವಾಗಿ ನಮೂದಿಸಲು ಎಲ್ಲಾ ಕಂದಾಯ ಅಧಿಕಾರಿಗಳಿಗೆ ಸೂಚಿಸಲು ಕಂದಾಯ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರು ಆದೇಶಿಸಿರುತ್ತಾರೆ,

ಹೆಂಡತಿಗೆ/ ಸೊಸೆಗೆ ಕುಟುಂಬದ ಆಸ್ತಿಯಲ್ಲಿ ಪಾಲಿಲ್ಲ, ಆದರೆ ಕುಟುಂಬದ ವಾಸದ ಮನೆಯಲ್ಲಿ ವಾಸ ಮಾಡುವ ಹಕ್ಕಿದೆ. ಒಂದು ವೇಳೆ ಗಂಡ ಮೃತಪಟ್ಟಲ್ಲಿ ಗಂಡನ ಆಸ್ತಿಯಲ್ಲಿ ಆಕೆಗೆ ಮತ್ತು ಆಕೆಯ ಮಕ್ಕಳಿಗೆ ಅದರಲ್ಲಿ ಹಕ್ಕು ಬರುತ್ತದೆ. ಗಂಡ ಇರುವಾಗ ಅವಳನ್ನು ಪೋಷಿಸುವ ಕರ್ತವ್ಯ ಗಂಡನದಾಗಿರುತ್ತದೆ. ಒಂದು ವೇಳೆ ಗಂಡ ಆಕೆಯನ್ನು ನಿರ್ಲಕ್ಷಿಸಿದ್ದಲ್ಲಿ, ಆಕೆಗೆ ಗಂಡನಂದ ಜೀವನಾಂಶ ಕೇಳುವ ಹಕ್ಕಿದೆ. ಗಂಡ ಖರ್ಚಿಗೆ ಕೊಡದಿದ್ದಲ್ಲಿ ಆತನ ಪಾಲಿನ ಆಸ್ತಿಯನ್ನು ಮುಟ್ಟುಗೋಲು ಹಾಕಿ ಜೀವನಾಂಶ ಪಡೆಯಬಹುದು.

**ಉಯಿಲು(ಮರಣ ಶಾಸನ)(ವೀಲುನಾಮೆ)**

- ಒಂದು ವ್ಯಕ್ತಿಯ ಮರಣಾ ನಂತರ ತನ್ನ ಆಸ್ತಿಯ ವಿಲೇವಾರಿಗೆ ಸಂಬಂಧಿಸಿ ತನ್ನ ಇಚ್ಛೆಯನ್ನು ಬರವಣಿಗೆಯ ಮೂಲಕ ಘೋಷಿಸುವುದೇ ಉಯಿಲು ಅಥವಾ ಮರಣ ಶಾಸನ ಎನ್ನುತ್ತೇವೆ. ಈ ಶಾಸನವು ಆ ವ್ಯಕ್ತಿಯ ಮರಣದ ನಂತರ ಊರ್ಜಿತವಾಗುತ್ತದೆ ಅಥವಾ ಕ್ರಿಯೆಗೆ ಬರುತ್ತದೆ.
- ಒಬ್ಬ ವ್ಯಕ್ತಿಯು ತನ್ನ ಜೀವಿತಾವಧಿಯಲ್ಲಿ ಎಷ್ಟು ಬಾರಿ ಬೇಕಾದರೂ ಉಯಿಲು ಬರೆಯಬಹುದು. ಆದರೆ ಹೊಸದಾಗಿ ಉಯಿಲನ್ನು ಮಾಡುವಾಗ ಈ ಹಿಂದಿನ ವೀಲುನಾಮೆಗಳನ್ನು ರದ್ದು ಮಾಡಿ ಹೊಸದಾಗಿ ಮಾಡಲಾಗಿರುತ್ತದೆ ಎಂದು ಬರೆಯಬೇಕು. ಓಂದು ವೇಳೆ ಬರೆಯಲು ನೆನಪಿಲ್ಲದಿದ್ದಲ್ಲಿ ಇತ್ತೀಚೆಗೆ ಮಾಡಲಾಗಿರುವ ಉಯಿಲು ಊರ್ಜಿತಗೊಳ್ಳುತ್ತದೆ.
- ಒಬ್ಬ ವ್ಯಕ್ತಿ ಸಾಯುವವರೆಗೆ ಉಯಿಲನ್ನು ಎಷ್ಟು ಬಾರಿ ಬೇಕಾದರೂ ರದ್ದುಗೊಳಿಸಬಹುದು ಮತ್ತು ತಿದ್ದುಪಡಿಗೊಳಿಸಬಹುದು.
- ನಮ್ಮ ಸ್ವಯಾರ್ಜಿತ ಆಸ್ತಿಯನ್ನು ಮಾತ್ರ ನಾವು ಉಯಿಲು ಮಾಡಬಹುದು. ನಮ್ಮದು ಅಲ್ಲದ ಆಸ್ತಿಯನ್ನು ಉಯಿಲು ಮಾಡಿದರೆ ಅದು ಕೋರ್ಟಿನಲ್ಲಿ ನಿಲ್ಲುವುದಿಲ್ಲ.
- ನಮ್ಮದಾದ ಆಸ್ತಿಯನ್ನು ಉಯಿಲಿನ ಮೂಲಕ ನಾವು ಯಾರಿಗೆ ಬೇಕಾದರೂ ಕೊಡಬಹುದು.
- ಉಯಿಲು ನಾಮೆಯನ್ನು ಮಾಡುವ ವ್ಯಕ್ತಿಯು ಮಾನಸಿಕವಾಗಿ ಸ್ಥಿರ ಅಥವಾ ಸಾಮರ್ಥ್ಯವನ್ನು ಹೊಂದಿರಬೇಕು.
- ಉಯಿಲಿನಲ್ಲಿ ಬರೆದಿರುವ ಅಂಶಗಳು ಸ್ಪಷ್ಟವಾಗಿರಬೇಕು. ಯಾರಿಗೆ ಎಷ್ಟು, ಹೇಗೆ ಅನ್ನುವುದನ್ನು ಮಾತ್ರವಲ್ಲ, ಯಾಕೆ ಅನ್ನುವುದನ್ನೂ ವಿವರಿಸಿದರೆ ಒಳ್ಳೆಯದು.
- ಉಯಿಲು ಮಾಡುವ ವ್ಯಕ್ತಿಗೆ 18 ವರ್ಷ ತುಂಬಿರಬೇಕು ಮತ್ತು ಮಾನಸಿಕ ಸ್ವಾಸ್ಥ್ಯ ಹೊಂದಿರಬೇಕು.
- ಯಾವುದೇ ಮಾನಸಿಕ ಒತ್ತಡದಿಂದ ಉಯಿಲು ಮಾಡಿರಬಾರದು.
- ಯಾವುದೇ ಕರಾರು ಅಥವಾ ಒಪ್ಪಂದ ಹಾಕಿ ಉಯಿಲು ಮಾಡುವ ಹಾಗಿಲ್ಲ.
- ಇಂತಿಷ್ಟೇ ಸ್ಟಾಂಪ್ ಹಾಕಬೇಕು ಅಂತ ಇಲ್ಲ. ಸಾಮಾನ್ಯ ಹಾಳೆಯಲ್ಲೂ ಬರೆಯಬಹುದು. ಅದಕ್ಕೆ ಇಬ್ಬರು ಸಾಕ್ಷಿಗಳ ಸಹಿ ಇರಬೇಕು, ಹಾಗೆಯೇ ವಿಲ್ ಅನ್ನು ರಿಜಿಸ್ಟರ್ ಮಾಡಬೇಕಿಲ್ಲ, ಆದರೆ ಮಾಡಿಸಿದರೆ ಅದನ್ನು ಸಾಬೀತು ಮಾಡುವುದು ಸುಲಭ.

**ವೀಲು ನಾಮೆಯಲ್ಲಿ ಎರಡು ವಿಧಗಳು**

1. ವಿಶೇಷ ವೀಲುನಾಮೆ: ಉಯಿಲು ಮಾಡುವ ವ್ಯಕ್ತಿ ಸೈನಿಕ, ವೈಮಾನಿಕ ಅಥವಾ ನಾವಿಕ ಆಗಿದ್ದರೆ ಆತನು ಯುದ್ಧ ಸಂದರ್ಭ ಅಥವಾ ಇನ್ನಿತರ ಸನ್ನಿವೇಶಗಳಲ್ಲಿ ಭಾಗಶಃ ಲಿಖಿತ ಮತ್ತು ಭಾಗಶಃ ಮೌಖಿಕ ಅಥವಾ ಸಂಪೂರ್ಣ ಮೌಖಿಕ ಉಯಿಲನ್ನು ಮಾಡಬಹುದು. ಇಂತಹ ಉಯಿಲನ್ನು ವಿಶೇಷ ವೀಲುನಾಮೆ ಎಂದು ವ್ಯಾಖ್ಯಾನಿಸಲಾಗಿದೆ.
2. ವಿಶೇಷವಲ್ಲದ ವೀಲುನಾಮೆ: ವಿಶೇಷ ಉಯಿಲನ್ನು ಹೊರತುಪಡಿಸಿ ಇತರ ವಿಶೇಷವಲ್ಲದ ಉಯಿಲುಗಳೆಲ್ಲ ಲಿಖಿತ ರೂಪದಲ್ಲಿಯೇ ಇರಬೇಕು.

**ವಿನೀತಾ ಶರ್ಮ ವರ್ಸಸ್ ರಾಕೇಶ್ ಶರ್ಮ**

2005ರಂದು ಹಿಂದು ಉತ್ತರಾಧಿಕಾರ ಕಾಯ್ದೆಯು ತಿದ್ದುಪಡಿಗೊಂಡಿದ್ದು ಹೆಣ್ಣು ಮಕ್ಕಳಿಗೂ ಕುಟುಂಬದ ಅವಿಭಜಿತ ಆಸ್ತಿಯಲ್ಲಿ ಗಂಡು ಮಕ್ಕಳಂತೆ ಸಮಾನ ಹಕ್ಕು ನೀಡಿತು. ಆದರೆ 09.09.2005ರ ತಿದ್ದುಪಡಿಯ ಸಂದರ್ಭ ತಂದೆಯು ಜೀವಂತವಾಗಿದ್ದರೆ ಮಾತ್ರ ಹೆಣ್ಣು ಮಗುವಿಗೆ ಕುಟುಂಬದ ಅವಿಭಜಿತ ಆಸ್ತಿಯಲ್ಲಿ ಸಮಾನ ಪಾಲು ನೀಡುವಂತೆ ಕೆಲವು ತೀರ್ಪುಗಳನ್ನು ನ್ಯಾಯಾಲಯವು ಹೊರಡಿಸಿತು. ಈ ತಿದ್ದುಪಡಿಯ ವ್ಯಾಖ್ಯಾನವು ಹಲವಾರು ಗೊಂದಲಗಳನ್ನು ಸೃಷ್ಟಿಸಿತು. ಈ ಗೊಂದಲವನ್ನು ನಿವಾರಿಸುವ ನಿಟ್ಟಿನಲ್ಲಿ ಸರ್ವೋಚ್ಚ ನ್ಯಾಯಾಲಯವು 11.08.2020ರಂದು ಹೆಣ್ಣು ಮಕ್ಕಳ ಪರ ಶ್ಲಾಘನೀಯ ತೀರ್ಪು ಘೋಷಿಸಿದೆ. ವಿನೀತಾ ಶರ್ಮ ವರ್ಸಸ್ ರಾಕೇಶ್ ಶರ್ಮ ವ್ಯಾಜ್ಯದಲ್ಲಿ 2005ರ ತಿದ್ದುಪಡಿಯ ಸಂದರ್ಭ ತಂದೆ ಜೀವಂತವಾಗಿ ಇರಲಿ ಅಥವಾ ಇಲ್ಲದೇ ಇರಲಿ, ಹೆಣ್ಣು ಮಗು ಹುಟ್ಟಿದ ಕ್ಷಣವೇ ಆಕೆಯು ಕುಟುಂಬದ ಅವಿಭಜಿತ ಆಸ್ತಿಯಲ್ಲಿ ಸಮಾನ ಪಾಲು ಹೊಂದಿರುತ್ತಾಳೆ ಎಂದು ಘೋಷಿಸಿದೆ.

**ಮೌಲ್ಯಮಾಪನ**

1. ಪಿತ್ರಾರ್ಜಿತ ಆಸ್ತಿಗೆ ಹೆಂಡತಿಯರನ್ನು ಬಿಟ್ಟು ಕುಟುಂಬದಲ್ಲಿ ಹುಟ್ಟಿದ ಯಾ ದತ್ತು ತೆಗೆದುಕೊಂಡ ಎಲ್ಲಾ ಸದಸ್ಯರು ಅದರ ಮಾಲಿಕರಾಗುತ್ತಾರೆ. (ಸರಿ)
2. ಆಶ್ರಯ ಯೋಜನೆಯಲ್ಲಿ ಮಂಜೂರಾದ ಆಸ್ತಿಯನ್ನು ಯಾವಾಗ ಬೇಕಾದರೂ ಪರಭಾರೆ ಮಾಡಬಹುದು. (ತಪ್ಪು)
3. ಈಗ ಕುಟುಂಬದ ಆಸ್ತಿಯಲ್ಲಿ ಹೆಣ್ಣು ಮಕ್ಕಳಿಗೂ ಗಂಡು ಮಕ್ಕಳಂತೆ ಸಮಾನ ಪಾಲಿದೆ. (ಸರಿ)
4. ಸ್ವಯಾರ್ಜಿತ ಆಸ್ತಿಯನ್ನು ವ್ಯಕ್ತಿಯು ದಾನ ಮಾಡಬಹುದು. (ಸರಿ)
5. ಒಂದು ಬಾರಿ ವಿಲ್ ಬರೆದರೆ ಮತ್ತೆ ಅದನ್ನು ಬದಲಾಯಿಸುವಂತಿಲ್ಲ. (ತಪ್ಪು)
6. ಕುಟುಂಬದ ಒಬ್ಬ ಸದಸ್ಯ ಆಸ್ತಿಗಾಗಿ ಹೆಚ್ಚು ದುಡಿದಿದ್ದರೆ ಅಂತಹವರಿಗೆ ಆಸ್ತಿಯಲ್ಲಿ ಹೆಚ್ಚು ಭಾಗ ಸಿಗುತ್ತದೆ. (ತಪ್ಪು)
7. ಮುಸಲ್ಮಾನರಲ್ಲಿ ಹೆಂಡತಿಗೆ ಗಂಡನ ಆಸ್ತಿಯ 1/8 ಭಾಗ ಸಿಗುತ್ತದೆ. (ಸರಿ)
8. ಕ್ರೈಸ್ತರಲ್ಲಿ ತಂದೆ ತಾಯಿ ಇಬ್ಬರಿಗೂ ಮಗನ ಪಾಲಿನಲ್ಲಿ ಹಕ್ಕಿದೆ. (ತಪ್ಪು)
9. ವಿವಾಹಬಾಹಿರ ಸಂಬಂಧದಲ್ಲಿ ಹುಟ್ಟಿದ ಮಕ್ಕಳಿಗೆ ತಂದೆ ತಾಯಿಯ ಆಸ್ತಿಯಲ್ಲಿ ಪಾಲಿಲ್ಲ. (ತಪ್ಪು)
10. ಮುಸಲ್ಮಾನರಲ್ಲಿ ದತ್ತು ಮಕ್ಕಳಿಗೆ ಆಸ್ತಿಯಲ್ಲಿ ಪಾಲಿದೆ. (ತಪ್ಪು)

ಪ್ರಚಾರಾಂದೋಲನ

# ಕೌಟುಂಬಿಕ ಹಿಂಸೆಯಿಂದ ಮಹಿಳೆಯರ ರಕ್ಷಣಾ ಕಾಯ್ದೆ–2005

## ಮಹಿಳೆಯರ ಹಕ್ಕುಗಳ ಉಲ್ಲಂಘನೆ ಶಿಕ್ಷಾರ್ಹ ಅಪರಾಧವಾಗಿದೆ

## ಹಿಂಸೆಯ ವಿಧಗಳು

**ದೈಹಿಕ ಹಿಂಸೆ**

- ದೇಹಕ್ಕೆ ನೋವು, ಹಾನಿ ಉಂಟು ಮಾಡುವುದು, ಬೆದರಿಕೆ ಹಾಕುವುದು
- ಜೀವ, ಅಂಗಕ್ಕೆ ಅಪಾಯವನ್ನುಂಟು ಮಾಡುವುದು

  ಉದಾ : ಹೊಡೆಯುವುದು, ಸುಡುವುದು, ನೂಕುವುದು, ಊಟ ಕೊಡದಿರುವುದು, ಉಸಿರು ಕಟ್ಟುವಂತೆ ಮಾಡುವುದು ಇತ್ಯಾದಿ

**ಮಾನಸಿಕ ಹಿಂಸೆ**

- ಮನಸ್ಸಿಗೆ ಬೇಸರ, ನೋವು ಉಂಟು ಮಾಡುವುದು ಅಂದರೆ ಬೈಯುವುದು, ಎಲ್ಲಿಗೂ ಹೋಗದಂತೆ, ಯಾರಲ್ಲೂ ಮಾತನಾಡದಂತೆ ತಡೆಯುವುದು
- ಮಕ್ಕಳನ್ನು ಮಹಿಳೆಯಿಂದ ದೂರ ಮಾಡುವುದು
- ಹೆಣ್ಣೇ ಹೆತ್ತಳೆಂದು ಮೂದಲಿಸುವುದು
- ಲೈಂಗಿಕ ಬೈಗುಳ
- ಆತ್ಮಹತ್ಯೆಗೆ ಪ್ರಚೋದನೆ
- ಇಷ್ಟವಿಲ್ಲದವನ ಜೊತೆ ಮದುವೆ ಮಾಡುವುದು
- ವರದಕ್ಷಿಣೆಗಾಗಿ ಅವಮಾನಿಸುವುದು



**ಆರ್ಥಿಕ ಹಿಂಸೆ**

- ಆಸ್ತಿ, ಹಣ ಕೊಡಲು ನಿರಾಕರಣೆ
- ಉದ್ಯೋಗಸ್ಥ ಮಹಿಳೆಯಾಗಿದ್ದಲ್ಲಿ ಆಕೆಯ ಸಂಬಳ ಕಸಿಯುವುದು
- ತವರಿನಿಂದ ಕೊಟ್ಟ ಆಸ್ತಿ, ಒಡವೆಯನ್ನು ಕಿತ್ತುಕೊಳ್ಳುವುದು
- ಅವಳ ಆಸ್ತಿಯನ್ನು ಅವಳ ಒಪ್ಪಿಗೆ ಇಲ್ಲದೆ ಮಾರಾಟ ಮಾಡುವುದು
- ಅವಳ ಖರ್ಚು ವೆಚ್ಚಗಳಿಗೆ ಹಣ ಕೊಡದಿರುವುದು
- ಉದ್ಯೋಗಕ್ಕೆ ಹೋಗಲು ಬಿಡದಿರುವುದು
- ವರದಕ್ಷಿಣೆ ಕೇಳುವುದು

**ಲೈಂಗಿಕ ಹಿಂಸೆ**

- ಹೆಂಡತಿಯ ಲೈಂಗಿಕ ಬಯಕೆಗಳನ್ನು ಪೂರೈಸದಿರುವುದು
- ಲೈಂಗಿಕ ಸಂಬಂಧವನ್ನು ಬೇರೆ ಮಹಿಳೆಯೊಂದಿಗೆ ಹೊಂದಿರುವುದು
- ಒತ್ತಾಯಪೂರ್ವಕ, ಅಸಹಜ, ಬಲತ್ಕಾರದ ಸಂಭೋಗ
- ಮಕ್ಕಳ ದುರುಪಯೋಗ

## ಕಾಯ್ದೆಯಡಿ ಪರಿಹಾರ

**ರಕ್ಷಣಾ ಆದೇಶ**

- ತನ್ನ ಮತ್ತು ಮಕ್ಕಳ ಮೇಲೆ, ತನಗೆ ಸಹಾಯ ಮಾಡಿದವರ ಮೇಲೆ ದೌರ್ಜನ್ಯ ನಡೆಸಬಾರದು
- ಉದ್ಯೋಗದ ಸ್ಥಳ ಮತ್ತು ಮಕ್ಕಳು ಓದುತ್ತಿರುವ ಶಾಲೆಗೆ ಪ್ರವೇಶಿಸದಂತೆ
- ಮಕ್ಕಳನ್ನು ವೈಯಕ್ತಿಕವಾಗಿ, ಮೌಖಿಕವಾಗಿ, ಲಿಖಿತವಾಗಿ ದೂರವಾಣಿ ಅಥವಾ ವಿದ್ಯುನ್ಮಾನ ಮಾಧ್ಯಮಗಳ ಮೂಲಕ ಸಂಪರ್ಕಿಸದಂತೆ
- ಅವಳ ಆಸ್ತಿ–ಪಾಸ್ತಿ, ಸೊತ್ತುಗಳಿಂದ ಆಕೆಯನ್ನು ವಂಚಿತಳನ್ನಾಗಿ ಮಾಡದಿರಲು




**ವಾಸ್ತವ್ಯದ ಆದೇಶ**

- ತೊಂದರೆಗೊಳಗಾದ ಮಹಿಳೆಯನ್ನು ಮನೆಯಿಂದ ಹೊರಗೆ ಹಾಕದಂತೆ ಆದೇಶ
- ವಾಸದ ಮನೆಯಿಂದ ಆತನೇ ಹೊರಹೋಗುವಂತೆ ಆದೇಶ
- ಅವಳ ಮನೆಗೆ ಪ್ರವೇಶಿಸದಂತೆ ಆದೇಶ
- ವಾಸದ ಮನೆಯನ್ನು ಪರಭಾರೆ ಮಾಡದಂತೆ ಆದೇಶ
- ಅವಶ್ಯವಿದ್ದಲ್ಲಿ ವಾಸಿಸಲು ಪರ್ಯಾಯ ವ್ಯವಸ್ಥೆ ಮಾಡುವಂತೆ ಆದೇಶ

**ಸುಪರ್ದಿ**

- ಮಕ್ಕಳನ್ನು ಸಂತ್ರಸ್ತೆಯ ಸುಪರ್ದಿಗೆ ನೀಡುವುದು

**ಆರ್ಥಿಕ ಪರಿಹಾರ**

- ಕೌಟುಂಬಿಕ ಹಿಂಸೆಯಿಂದ ಮಹಿಳೆಯ ಹಾಗೂ ಆಕೆಯ ಮಕ್ಕಳು ಹೊಂದಬಹುದಾದ ಆರ್ಥಿಕ ನಷ್ಟವನ್ನು ಭರಿಸುವಂತೆ ನ್ಯಾಯಾಲಯದ ಆದೇಶ ಪಡೆಯಬಹುದು, ಜೀವನಾಂಶವನ್ನು ಕೇಳಬಹುದು.
- ಮಕ್ಕಳ ಪಾಲನೆ
- ಮಕ್ಕಳನ್ನು ತನ್ನ ಜತೆಯಲ್ಲಿ ತಾತ್ಕಾಲಿಕವಾಗಿ ಇರಿಸಿಕೊಳ್ಳುವ, ಪ್ರತಿವಾದಿಗೆ ಮಕ್ಕಳನ್ನು ಭೇಟಿಯಾಗಲು ನಿರ್ದಿಷ್ಟ ಆದೇಶ ಪಡೆಯಬಹುದು.

**ಆದೇಶಗಳ ಉಲ್ಲಂಘನೆಗೆ ಒಂದು ವರ್ಷ ಜೈಲು ಮತ್ತು ರೂ. 20,000 ದಂಡ**

# ಸುಮ್ಮನಿರಬೇಡಿ !!! ಇವರಿಗೆ ಕರೆ ಮಾಡಿ, ದೂರು ನೀಡಿ







ಸೇವಾ ಸಂಸ್ಥೆ

ರಕ್ಷಣಾಧಿಕಾರಿ

ಕಾನೂನು ನೆರವು

ವಕೀಲರು

ಮ್ಯಾಜಿಸ್ಟ್ರೇಟರ್

### ಪೊಲೀಸ್
- ಹಿಂಸೆಗೊಳಗಾದ ಮಹಿಳೆಗೆ ಅವಳ ಹಕ್ಕಿನ ಬಗ್ಗೆ ಅರಿವು ಮೂಡಿಸುವುದು
- ರಕ್ಷಣಾಧಿಕಾರಿಗಳ ಬಳಿ ಕಳುಹಿಸುವುದು
- ಮಹಿಳೆ ಇಚ್ಛಿಸಿದಲ್ಲಿ ಕ್ರಿಮಿನಲ್ ಪ್ರಕರಣ ದಾಖಲಿಸುವುದು
- ನ್ಯಾಯಾಲಯದ ಆದೇಶವನ್ನು ಅನುಷ್ಠಾನಗೊಳಿಸುವುದು

### ವೈದ್ಯಕೀಯ ಸೇವೆ
- ಹಿಂಸೆಗೊಳಗಾದ ಮಹಿಳೆಗೆ ಅವಳ ಹಕ್ಕಿನ ಬಗ್ಗೆ ಅರಿವು ಮೂಡಿಸುವುದು
- ರಕ್ಷಣಾಧಿಕಾರಿ ಮತ್ತು ಇನ್ನಿತರ ಸೇವಾ ಸಂಸ್ಥೆಗಳಿಗೆ ಕಳುಹಿಸುವುದು
- ಕೌಟುಂಬಿಕ ಘಟನಾ ವರದಿ ದಾಖಲಿಸುವುದು
- ವೈದ್ಯಕೀಯ ಸೌಲಭ್ಯ ಒದಗಿಸುವುದು

### ತಾತ್ಕಾಲಿಕ ವಸತಿ
- ಹಿಂಸೆಗೊಳಗಾದ ಮಹಿಳೆಗೆ ಅವಳ ಹಕ್ಕಿನ ಬಗ್ಗೆ ಅರಿವು ಮೂಡಿಸುವುದು
- ರಕ್ಷಣಾಧಿಕಾರಿ ಮತ್ತು ಇನ್ನಿತರ ಸೇವಾ ಸಂಸ್ಥೆಗಳಿಗೆ ಕಳುಹಿಸುವುದು
- ಆಶ್ರಯ ನೀಡುವುದು

### ಸೇವಾ ಸಂಸ್ಥೆ
- ಹಿಂಸೆಗೊಳಗಾದ ಮಹಿಳೆಗೆ ಅವಳ ಹಕ್ಕಿನ ಬಗ್ಗೆ ಅರಿವು ಮೂಡಿಸುವುದು
- ಕೌಟುಂಬಿಕ ಘಟನಾ ವರದಿಯನ್ನು ರಕ್ಷಣಾಧಿಕಾರಿಗೆ ಕಳುಹಿಸುವುದು
- ರಕ್ಷಣಾಧಿಕಾರಿ ಮತ್ತು ಇನ್ನಿತರ ಸೇವಾ ಸಂಸ್ಥೆಗಳಿಗೆ ಕಳುಹಿಸುವುದು
- ನೋಂದಾಯಿತ ಸೇವೆಗಳನ್ನು ಒದಗಿಸುವುದು

### ರಕ್ಷಣಾಧಿಕಾರಿ
- ಹಿಂಸೆಗೊಳಗಾದ ಮಹಿಳೆಗೆ ಅವಳ ಹಕ್ಕಿನ ಬಗ್ಗೆ ಅರಿವು ಮೂಡಿಸುವುದು
- ಕೌಟುಂಬಿಕ ಘಟನಾ ವರದಿ ಭರ್ತಿ ಮಾಡಿ ಪೊಲೀಸ್, ಮ್ಯಾಜಿಸ್ಟ್ರೇಟರ್‌ಗೆ ಕಳುಹಿಸುವುದು
- ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸುವುದು
- ಸೂಕ್ತ ಸೇವೆಗಳನ್ನು ಪಡೆಯಲು ಮಾರ್ಗದರ್ಶನ ನೀಡುವುದು

### ಕಾನೂನು ಸಲಹೆ/ನೆರವು
- ರಕ್ಷಣಾಧಿಕಾರಿಯು ಸಲ್ಲಿಸಿದ ಅರ್ಜಿಯ ಬಳಿಕ ಸಂತ್ರಸ್ತೆಯ ಪರವಾಗಿ ನ್ಯಾಯಾಲಯದಲ್ಲಿ ಪ್ರತಿನಿಧಿಸುವುದು

### ವಕೀಲರು
- ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸುವುದು

### ಕೌಟುಂಬಿಕಾ ಘಟನಾ ವರದಿ (DIR)
ಕೌಟುಂಬಿಕ ಹಿಂಸೆಯನ್ನು ದಾಖಲಿಸುವ ಮತ್ತು ಹಿಂಸೆಯ ಸ್ವರೂಪವನ್ನು ವ್ಯಾಖ್ಯಾನಿಸುವ ನಮೂನೆ. ಸಂತ್ರಸ್ತೆಯು ಪರಿಹಾರಕ್ಕಾಗಿ ನ್ಯಾಯಾಲಯದ ಮೊರೆ ಹೋಗಲು ಇಚ್ಛಿಸಿದಲ್ಲಿ ಈ ನಮೂನೆಯನ್ನು ಭರ್ತಿ ಮಾಡುವುದು ಅವಶ್ಯಕ, ಹಿಂಸೆಯು ಮರುಕಳಿಸುವ ಪಕ್ಷದಲ್ಲಿ ಸಂತ್ರಸ್ತೆಯು ಈ ನಮೂನೆಯನ್ನು ಪ್ರತೀ ಬಾರಿ ಭರ್ತಿ ಮಾಡತಕ್ಕದ್ದು.

### ಮ್ಯಾಜಿಸ್ಟ್ರೇಟರ್
- ಅರ್ಜಿಯನ್ನು ಸ್ವೀಕರಿಸುವುದು
- ಆಪ್ತ ಸಮಾಲೋಚನೆ ಮತ್ತು ಮಧ್ಯಸ್ಥಿಕೆಗೆ ಶಿಫಾರಸ್ಸು ಮಾಡುವುದು
- ಆದೇಶ ಹೊರಡಿಸುವುದು

### ಅರ್ಜಿ
ಸಂತ್ರಸ್ತೆಯು ನ್ಯಾಯಾಲಯದಿಂದ ಪರಿಹಾರ ಪಡೆಯಲು ಬಯಸಿದಲ್ಲಿ ಅರ್ಜಿಯನ್ನು ಸಲ್ಲಿಸಲಾಗುತ್ತದೆ. ಕೌಟುಂಬಿಕ ಘಟನಾ ವರದಿಯನ್ನು ನ್ಯಾಯಾಲಯಕ್ಕೆ ಸಲ್ಲಿಸಿದ ನಂತರ ಕಾನೂನಾತ್ಮಕ ಪ್ರಕ್ರಿಯೆ ಪ್ರಾರಂಭವಾಗುತ್ತದೆ.

ಚಿತ್ರ ಕೃಪೆ : ಮುಹಿಮ್, ಗೂಗಲ್....

ಪ್ರಕಟಣೆ :
ಡೆವಲಪ್‌ಮೆಂಟ್ ಎಜುಕೇಶನ್ ಸರ್ವಿಸ್ (ಡೀಡ್ಸ್), ಮಂಗಳೂರು-575 002
ದೂರವಾಣಿ : 0824-2217022, 4281037
ವೆಬ್‌ಸೈಟ್ : www.deedsmangaluru.in ಇಮೇಲ್ : deeds82@rediffmail.com
(ಪೂರಕ ಕಾನೂನು ತರಬೇತಿ ಯೋಜನೆ : 2020-2023)

## ಡೀಡ್ಸ್ /ಸಂವೇದಿ ಪ್ರಕಟಣೆಗಳು

1. ಹುಡುಗಿ ಎಂದರೆ ಏನು?
   ಹುಡುಗ ಎಂದರೆ ಏನು?
   (ಲಿಂಗತ್ವ ತರಬೇತಿ ಕೈಪಿಡಿ) ಬೆಲೆ : ರೂ. 75.00

2. ಸುದ್ದಿ ಮಾಧ್ಯಮಗಳಲ್ಲಿ ಮಹಿಳೆ
   (ಸುದ್ದಿ ಮಾಧ್ಯಮಗಳಲ್ಲಿ ಮಹಿಳೆಯರ ಪಾತ್ರ
   ಮತ್ತು ಚಿತ್ರಣದ ಅಧ್ಯಯನ ವರದಿ ಬೆಲೆ : ರೂ. 25.00

3. ಇವಾಳಜ್ಜಿಯೂ ಆದಮಜ್ಜನೂ (ನಾಟಕ) ಬೆಲೆ : ರೂ. 30.00

4. ಏನಿದು ಉದ್ಯೋಗ ಖಾತರಿ? ಬೆಲೆ : ರೂ. 50.00

5. ಮಾಹಿತಿ ಹಕ್ಕು – ನೂರಾರು ಪ್ರಶ್ನೆಗಳು ಬೆಲೆ : ರೂ. 100.00

## ನಮ್ಮನ್ನು ಸಂಪರ್ಕಿಸಿ

- ಲಿಂಗತ್ವ, ಮಹಿಳಾ ಕಾನೂನುಗಳು, ಹದಿಹರೆಯ, ನಾಯಕತ್ವ ಮತ್ತು ಆಡಳಿತ, ತರಬೇತಿ ವಿನ್ಯಾಸ ಇಂತಹ ಯಾವುದೇ ರೀತಿಯ ತರಬೇತಿ ಸಂಘಟನೆ–ನಿರ್ವಹಣೆಗೆ
- ಯಾವುದೇ ವಿಷಯಕ್ಕೆ ಸಂಬಂಧಿಸಿದ ತರಬೇತಿ ಕೈಪಿಡಿ ರಚನೆಗೆ
- ಹಿಂಸೆಯಿಂದ ಬಳಲುತ್ತಿರುವ ಮಹಿಳೆಯರ ಕೌನ್ಸಿಲಿಂಗ್‌ಗೆ




**ಡೆವಲಪ್‌ಮೆಂಟ್ ಎಜುಕೇಶನ್ ಸರ್ವಿಸ್ (ಡೀಡ್ಸ್)**
ಆನಂದ ಅಪಾರ್ಟ್‌ಮೆಂಟ್ಸ್, ಕದ್ರಿ, ಮಂಗಳೂರು, ದ.ಕ. – 575002
ದೂರವಾಣಿ: 0824–2217022, 4281037
Email : deeds82@rediffmail.com
Website : www.deedsmangaluru.in